# ಸ್ಥಿತ್ಯಂತರ ಸಮಾಜದ ಸಂಘರ್ಷಗಳ ಸ್ವರೂಪ

## (ಶ್ರೀಕೃಷ್ಣ ಆಲನಹಳ್ಳಿ ಕಥನ ಸಾಹಿತ್ಯ ಮುಖೇನ)

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ
ಎಂ. ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)


ಸಂಶೋಧಕರು

**ಧರ್ಮವೀರ ಕೆ. ಹೆಚ್.**

ಮಾರ್ಗದರ್ಶಕರು

**ಡಾ. ಅಮರೇಶ ನುಗಡೋಣಿ**

ಪ್ರವಾಚಕರು





ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೬ ೦೭




# ಸ್ಥಿತ್ಯಂತರ ಸಮಾಜದ ಸಂಘರ್ಷಗಳ ಸ್ವರೂಪ

## (ಶ್ರೀಕೃಷ್ಣ ಆಲನಹಳ್ಳಿ ಕಥನ ಸಾಹಿತ್ಯ ಮುಖೇನ)

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು

**ಧರ್ಮವೀರ ಕೆ. ಹೆಚ್.**





ಮಾರ್ಗದರ್ಶಕರು

**ಡಾ. ಅಮರೇಶ ನುಗಡೋಣಿ**

ಪ್ರವಾಚಕರು



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೬-೦೭

## ಮಾರ್ಗದರ್ಶಕರ ಪ್ರಮಾಣಪತ್ರ

**ಸ್ಥಿತ್ಯಂತರ ಸಮಾಜದ ಸಂಘರ್ಷಗಳ ಸ್ವರೂಪ (ಶ್ರೀಕೃಷ್ಣ ಆಲನಹಳ್ಳಿ ಕಥನ ಸಾಹಿತ್ಯ ಮುಖೇನ)** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಧರ್ಮವೀರ ಕೆ. ಹೆಚ್. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಸ್ಥಳ** : ವಿದ್ಯಾರಣ್ಯ

**ದಿನಾಂಕ** :

**ಡಾ. ಅಮರೇಶ ನುಗಡೋಣಿ**

ಪ್ರವಾಚಕರು ಹಾಗೂ ಮಾರ್ಗದರ್ಶಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪ್ರಮಾಣ ಪತ್ರ

**ಸ್ಥಿತ್ಯಂತರ ಸಮಾಜದ ಸಂಘರ್ಷಗಳ ಸ್ವರೂಪ (ಶ್ರೀಕೃಷ್ಣ ಆಲನಹಳ್ಳಿ ಕಥನ ಸಾಹಿತ್ಯ ಮುಖೇನ)** ಎಂಬ ನಿಬಂಧವನ್ನು ಡಾ. ಅಮರೇಶ ನುಗಡೋಣಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಭಾಷಾ ನಿಕಾಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಸ್ಥಳ** : ವಿದ್ಯಾರಣ್ಯ

**ದಿನಾಂಕ** :

**ಧರ್ಮವೀರ ಕೆ. ಹೆಚ್.**
ಸಂಶೋಧಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಮಹತ್ವ ಮತ್ತು ವ್ಯಾಪ್ತಿ

## ಪ್ರವೇಶ

ಶ್ರೀ ಕೃಷ್ಣ ಆಲನಹಳ್ಳಿ ಅವರ ಕಥನ ಸಾಹಿತ್ಯವನ್ನು ಕೇಂದ್ರವಾಗಿಟ್ಟುಕೊಂಡು ಈ ಅಧ್ಯಯನ ನಡೆಸಲಾಗುವುದು. ಆಧುನಿಕ ಕನ್ನಡ ಸಾಹಿತ್ಯದ ಎರಡನೇ ತಲೆಮಾರಿನ ಸಾಹಿತ್ಯವನ್ನು ನವ್ಯ ಸಾಹಿತ್ಯ ಎಂದುಗುರುತಿಸಲಾಗಿದೆ. ನವೋದಯ ಸಾಹಿತ್ಯ ಚಳುವಳಿಯ ನಂತರ ಪ್ರಗತಿಶೀಲ ಸಾಹಿತ್ಯ ಚಳುವಳಿ ಆರಂಭವಾದರೂ ಅದು ಕೆಲವೇ ಸಾಹಿತಿಗಳಿಂದ ಕೆಲವೇ ವರ್ಷಗಳ ಕಾಲ ಬಾಳಿ ಬದುಕಿತು. ೫೦ ರ ದಶಕದಿಂದ ನವ್ಯ ಸಾಹಿತ್ಯ ಚಳುವಳಿ ಆರಂಭವಾಗಿ ೭೫ ರ ದಶಕದವರೆಗೆ ಸಮೃದ್ಧವಾಗಿ ಬೆಳೆಯಿತು. ಗೋಪಾಲಕೃಷ್ಣ ಅಡಿಗ, ಕೆ. ಎಸ್. ನರಸಿಂಹಸ್ವಾಮಿ, ಬಿ. ಸಿ. ರಾಮಚಂದ್ರ ಶರ್ಮ, ಯು. ಆರ್. ಅನಂತಮೂರ್ತಿ, ಪಿ. ಲಂಕೇಶ್, ಯಶವಂತ ಚಿತ್ತಾಲ, ಶಾಂತಿನಾಥ ದೇಸಾಯಿ ಮುಂತಾದವರಿಂದ ನವ್ಯ ಸಾಹಿತ್ಯವು ವಿಪುಲವಾಗಿ ಬೆಳೆಯಿತು. ಶ್ರೀಕೃಷ್ಣ ಆಲನಹಳ್ಳಿ ಅವರೂ ಈ ಸಾಲಿಗೆ ಸೇರಿದವರು ಮತ್ತು ಚಿಕ್ಕ ವಯಸ್ಸಿಗೆ ಕಥೆ, ಕಾದಾಂಬರಿ, ಕವನ ಬರೆದು ಸಮಕಾಲೀನ ಸಾಹಿತ್ಯಕ್ಕೆ ಭಿನ್ನವಾದ ಆಯಾಮ ಸೇರಿಸಿದವರು. ನಗರ ಕೇಂದ್ರಿತ ಸಾಹಿತ್ಯವನ್ನು ಗ್ರಾಮಕೇಂದ್ರಿತವಾಗಿ ಮಾಡಿದವರಲ್ಲಿ ಆಲನಹಳ್ಳಿ ಅವರು ಪ್ರಮುಖರು.

ಶ್ರೀ ಕೃಷ್ಣ ಆಲನಹಳ್ಳಿ ಅವರ ಕಾಡು, ಪರಸಂಗದ ಗೆಂಡೆತಿಮ್ಮ, ಭುಜಂಗಯ್ಯನ ದಶಾವತಾರಗಳು ಮತ್ತು ಗೋಡೆ ಎಂಬ ಕಾದಂಬರಿಗಳು ಅವರ ಕಥೆಗಳು ನವ್ಯ ಸಾಹಿತ್ಯದ ಗುಣಲಕ್ಷಣಗಳನ್ನು ವಿಸ್ತರಿಸಿ ಬಲಪಡಿಸಿದವು. ಮುಖ್ಯವಾಗಿ ಆಧುನಿಕತೆಯು ಸಮಾಜದಲ್ಲಿ ಉಂಟು ಮಾಡಿದ ಪರಿಣಾಮಗಳನ್ನು ಪರಿಶೀಲಿಸುವ ಗುಣ ಅವರ ಕಥೆಗಳಲ್ಲಿ ಎದ್ದುಕಾಣುತ್ತದೆ. ಸಾಂಪ್ರದಾಯಿಕ ಜೀವನ ಪದ್ಧತಿಯ ಸಮಾಜದಲ್ಲಿ ಆಧುನಿಕತೆ ಒಂದು ಬಿರುಗಾಳಿಯಾಗಿ ಪ್ರವೇಶಿಸಿ ಸಂಘರ್ಷಕ್ಕೆ ದಾರಿಮಾಡಿಕೊಡುವ, ಸ್ಥಿತ್ಯಂತರ ಕಾಲದ ಅರಾಜಕತೆಯನ್ನು ಆಲನಹಳ್ಳಿ ಕಥನ ಬಹಳ ಸೂಕ್ಷ್ಮವಾಗಿ ಯಾವ ಅಬ್ಬರವಿಲ್ಲದೆ ಕಟ್ಟಿಕೊಡುತ್ತದೆ. ಇದರಿಂದ ಈ ಕಥನಗಳು ಇತಿಹಾಸಕ್ಕೆ ಮುಖ್ಯ ಆಕರಗಳಾಗಿ ನಿಲ್ಲುತ್ತವೆ. ಬದಲಾವಣೆಗೆ ಒಳಗಾಗುವ ಸಮಾಜ ಮತ್ತು ಜನರ ಆತಂಕ, ತಲ್ಲಣಗಳನ್ನು ಮಾರ್ಮಿಕವಾಗಿ ಆಲನಹಳ್ಳಿಯವರ ಕಥನ ಸಾಹಿತ್ಯ ತಿಳಿಸುತ್ತದೆ. ಇದರಿಂದಾಗಿ ಸ್ಥಿತ್ಯಂತರಗೊಳ್ಳುವ ಸಮಾಜದ ಸಂಘರ್ಷ ಮತ್ತು ಅದರ ಸ್ವರೂಪವನ್ನು ಗ್ರಹಿಸಲು ಈ ಅಧ್ಯಯನದಲ್ಲಿ ಪ್ರಯತ್ನಿಸಲಾಗುವುದು.

ಶ್ರೀಕೃಷ್ಣ ಆಲನಹಳ್ಳಿ ಅವರ ಕಥೆ ಮತ್ತು ಕಾದಂಬರಿ ಸಾಹಿತ್ಯವನ್ನು ಕುರಿತು ಇಲ್ಲಿ ಅಧ್ಯಯನ ನಡೆಸಲಾಗುವುದು.

## ಅಧ್ಯಯನದ ಉದ್ದೇಶ

ಶ್ರೀಕೃಷ್ಣ ಆಲನಹಳ್ಳಿಯವರು ಕನ್ನಡದ ನವ್ಯ ಸಾಹಿತ್ಯ ಸಂದರ್ಭದಲ್ಲಿ ಮಾತ್ರವಲ್ಲದೆ ನವ್ಯೋತ್ತರ ಕಾಲಘಟ್ಟದಲ್ಲೂ ಪ್ರಸ್ತುತವೆನಿಸುತ್ತಾರೆ. ಈವರೆಗೆ ವಿಮರ್ಶರು ಗುರುತಿಸಿರುವಂತೆ ಇವರ ಕಥನ ನವ್ಯದ ಮನಸ್ಥಿತಿ

ಮತ್ತು ಆಧುನಿಕ ಬದುಕಿನ ತಲ್ಲಣಗಳು, ಪ್ರೀತಿ, ಪ್ರೇಮ, ಕಾಮಗಳನ್ನಷ್ಟೆ ಹಸಿಹಸಿಯಾಗಿ ಚಿತ್ರಿಸದೆ ಅದರಾಚೆಗೂ ಮೂಲಭೂತವಾಗಿ ಶ್ರೇಷ್ಠ ಸಾಹಿತ್ಯಕ್ಕಿರುವ ಎಲ್ಲ ಸತ್ವ, ಸಾರ್ವಕಾಲಿಕತೆ, ಮೌಲಿಕತೆ ಇರುವುದನ್ನು ಕಾಣಬಹುದಾಗಿದೆ. ಆಲನಹಳ್ಳಿಯವರು ಕಣ್ಮರೆಯಾಗಿ ಒಂದು ದಶಕಕ್ಕೂ ಹೆಚ್ಚಿನ ಕಾಲ ಕಳೆದರೂ ಅವರ ಸಾಹಿತ್ಯಕ್ಕಿರುವ ಮಹತ್ವ ಕಡಿಮೆಯಾಗಿಲ್ಲ. ಕಾಲದ ಸತ್ವ ಪರೀಕ್ಷೆಯಲ್ಲಿ ಯಶಸ್ವಿಯಾಗಿ ಗೆದ್ದಂತೆ ತೋರುವ ಆಲನಹಳ್ಳಿಯವರ ಸಾಹಿತ್ಯ ಇಂದಿಗೂ ಚಿರನೂತನವಾಗಿದೆ. ಇವರ ಸಾಹಿತ್ಯಕ್ಕಿರುವ ಮೌಲಿಕತೆ ಮಾತ್ರವಲ್ಲ ಅದರ ಜನಪ್ರಿಯತೆಯ ಗುಣ ಕಿಂಚಿತ್ತೂ ಕಡಿಮೆಯಾಗದಿರುವುದು ಈ ಲೇಖಕನ ಅಧ್ಭುತ ಕಥನ ಕಲೆ ಮತ್ತು ಪ್ರತಿಭೆಗೆ ನಿದರ್ಶನವಾಗಿದೆಯೆಂದರೆ ತಪ್ಪಲ್ಲ.

ಆಲನಹಳ್ಳಿಯವರ ಕಥನ ಮೂಲಭೂತವಾಗಿ ಸಂಘರ್ಷದ ಗುಣವನ್ನು ಮೈಗೂಡಿಸಿಕೊಂಡೇ ಕಲೆಯಾಗಿ ಅರಳುತ್ತದೆ. ಇಲ್ಲಿ ವ್ಯಕ್ತವಾಗು ಸಿಟ್ಟು, ಅಸಹನೆ, ಆಕ್ರೋಶ, ಪ್ರತಿಭಟನೆ ಯಾವುದೂ ವಾಚ್ಯವಾಗದೆ ಕಲೆಯಲ್ಲಿ ಮೈದಾಳಿರುವುದು ಗಮನಾರ್ಹ ಸಂಗತಿಯಾಗಿದೆ. ವ್ಯವಸ್ಥೆಯ ವಿರುದ್ಧ ಬಂಡೆದ್ದ ಕ್ರಾಂತಿಕಾರನ ಮನಸ್ಥಿತಿಯಿದ್ದರೂ ಆಲನಹಳ್ಳಿಯವರಿಗೆ ಬದುಕಿನ ಬಗೆಗಿರುವ ಪುಟಿಯುತ್ತಿರುವ ಪ್ರೀತಿ, ಉತ್ಸಾಹ, ಹೊಸ ಕಾಣ್ಕೆಗಳು ಇವು ಅವರಲ್ಲಿ ಕೇವಲ ಸಿನಿಕತನವಾಗಬಹುದಾಗಿದ್ದ, ಅಸಂಗತವೆನ್ನಿಸಬಹುದಾದಂತಹ ಸಂಗತಿಗಳಿಗೆ ಅರ್ಥಪೂರ್ಣ ಕಲಾತ್ಮಕತೆಯ ಆವರಣವೊಂದನ್ನು ಕಟ್ಟಿಕೊಡುವ ಮೂಲಕ ಮಹತ್ವದ ಲೇಖಕರೆನಿಸಿದ್ದಾರೆ.

ಇಂತಹ ಸಂಕೀರ್ಣ ವ್ಯಕ್ತಿತ್ವ ಮತ್ತು ಒಳನೋಟಗಳನ್ನು ಹೊಂದಿದ್ದ ಆಲನಹಳ್ಳಿಯವರ ಕಥನ ಸಮಕಾಲೀನ ಸಂದರ್ಭದ ಎಲ್ಲ ಬಗೆಯ ಸಂಘರ್ಷಗಳನ್ನು ಅಸದೃಶವಾಗಿ ಹಿಡಿದಿಟ್ಟಿರುವುದು ವಿಶಿಷ್ಟವಾದುದಾಗಿದೆ. ಇವರ ಕಥನದಲ್ಲಿ ಅಭಿವ್ಯಕ್ತಿಗೊಂಡ ಇಂತಹ ಸಂಘರ್ಷಗಳ ಸ್ವರೂಪ ಎಂತಹದ್ದು ಎನ್ನುವುದು ಕುತೂಹಲಕಾರಿ ಅಂಶವಾಗಿದೆ. ಈ ಬಗೆಯ ಸಂಘರ್ಷವು ಸಾಂಪ್ರದಾಯಿಕ, ಸಾಮಾಜಿಕ, ಕೌಟುಂಬಿಕ, ಲೈಂಗಿಕ, ಮನುಷ್ಯ ಸಂಬಂಧಗಳ ನಡುವಿನ ಸಂಘರ್ಷವನ್ನು ಯಾವ ಬಗೆಯಲ್ಲಿ ನಿರೂಪಿಸುತ್ತಿದೆಯೆಂಬುದನ್ನು ಅರಿಯುವ ಪ್ರಯತ್ನ ಪ್ರಸ್ತುತ ಅಧ್ಯಯನದ ಹಿಂದಿದೆ.

**ಅಧ್ಯಯನದ ವ್ಯಾಪ್ತಿ**

ಪ್ರಸ್ತುತ ಅಧ್ಯಯನವು ಆಲನಹಳ್ಳಿಯವರ ಕಥೆ, ಕಾದಂಬರಿಗಳನ್ನಷ್ಟೇ ಅಧ್ಯಯನದ ಮುಖ್ಯ ಆಕರಗಳನ್ನಾಗಿಸಿಕೊಂಡು ಅವರ ಕಥನದ ನೆಲೆಯಲ್ಲಿ ಭಾರತೀಯ ಸಾಂಪ್ರದಾಯಿಕ ಸಮಾಜ ಮತ್ತು ಆಧುನಿಕತೆಯ ನಡುವಿನ ಸಂಘರ್ಷವನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗುವುದು. ಈ ಅಧ್ಯಯನದ ವ್ಯಾಪ್ತಿಯು ಕನ್ನಡದ ಪ್ರಮುಖ ಲೇಖಕರೊಬ್ಬರನ್ನು ಕೇಂದ್ರವಾಗಿಟ್ಟು ಕೊಂಡು ಅವರ ಕಥನದ ನೆಲೆಯನ್ನು ವಿಶ್ಲೇಷಣೆಗೊಳಪಡಿಸುವುದಾಗಿದೆ.

ಅಧ್ಯಾಯ ಎರಡು

## ಶ್ರೀಕೃಷ್ಣ ಆಲನಹಳ್ಳಿ ಕುರಿತ ಲೇಖನಗಳ ಸಮೀಕ್ಷೆ

ಶ್ರೀಕೃಷ್ಣಆಲನಹಳ್ಳಿ ಅವರ 'ತಪ್ತ' ಕಥಾಸಂಕಲನಕ್ಕೆ ಮುನ್ನುಡಿ ಬರೆಯುತ್ತಾ ಡಾ. ಯು. ಆರ್. ಅನಂತಮೂರ್ತಿ ಅವರು ಈ ಲೇಖಕರ ಕಥೆಗಳಲ್ಲಿರುವ ವೈಚಾರಿಕತೆಯನ್ನು ಪ್ರಶ್ನೆ ಮಾಡುತ್ತಾರೆ. ಇವರ ಕಥೆಗಳಲ್ಲಿನ ವೈಚಾರಿಕತೆ ಪ್ರಬುದ್ಧವಾದದ್ದಲ್ಲ ಎನ್ನುತ್ತಾರೆ. ಸುದೀರ್ಘವಾದ ಮುನ್ನುಡಿಯಲ್ಲಿ ಪ್ರತಿಯೊಂದು ಕಥೆಯಲ್ಲಿನ ವಿಚಾರಗಳನ್ನು ಹೇಳುತ್ತಾ ಹೊಸತು ಮತ್ತು ಹಳೆಯದನ್ನು ಬಳಸುವುದರಲ್ಲಿ ಸೋತಿರುವುದನ್ನು ಹೇಳುತ್ತಾರೆ. ಇಲ್ಲಿನ ನಾಯಕ ಪಾತ್ರಗಳ ನೈತಿಕತೆಯನ್ನು ಇದ್ದೂ ಇಲ್ಲದಂತೆ ಮಾಡುವ ಪೂರ್ವಗ್ರಹ ದೃಷ್ಟಿಕೋನ ಇದೆ ಎನ್ನುವ ವಿವರಣೆಯನ್ನು ಅನಂತಮೂರ್ತಿಯವರು ವ್ಯಕ್ತಪಡಿಸಿದ್ದಾರೆ. ಸೀಮಂತ, ಹುತ್ತ ಕಥೆಗಳನ್ನು ಒಪ್ಪಿಕೊಳ್ಳುವಂತೆ ಗೀಜಗದಗೂಡು, ಫೀನಿಕ್ಸ್, ಅಂಟಿಕೊಂಡ ನಂಟಿನ ಕೊನೆ ಬಲ್ಲವರಾರು, ಇನ್ನೊಂದು ಪ್ರಣಯ ಪ್ರಸಂಗಗಳನ್ನು ಇವರು ಅಷ್ಟಾಗಿ ಒಪ್ಪಿಕೊಳ್ಳದ ಕಥೆಗಳಾಗಿವೆ. ಹಲವು ಕಥೆಗಳಲ್ಲಿನ ಸಹಾನುಭೂತಿಯನ್ನು ಇವರು ಲಿಬರಲ್ ಎಂದು ಅರ್ಥೈಸಿದ್ದಾರೆ. ಕೇವಲ ವಾಸ್ತವದ ಸ್ಥಿತಿಯನ್ನು ಹೇಳುವ ಕೆಲವು ಕಥೆಗಳಿದ್ದರೂ ಅವುಗಳಿಂದ ಮುಂದೆ ಪರಿಣಾಮವೆಲ್ಲಾ ಶೂನ್ಯವಾಗಿಯೇ ಇದೆ. ಯಾವುದೇ ಬದಲಾವಣೆಗೆ ಅವಕಾಶವಿಲ್ಲ. ತಪ್ತ ನಾಯಕನಂತೆ ಪರಕೀಯ ಪ್ರಜ್ಞೆಯುಳ್ಳ ಇವನಿಗೆ ಗಾಢವಾದದ್ದು ಬಾಲ್ಯದಲ್ಲಿನ ನೆನಪುಗಳೇ. ಆದರೆ ಅದೆ ಪ್ರಬುದ್ಧನಾದವನ ವೈಚಾರಿಕತೆ ಬಾಲ್ಯದ ನೆನಪುಗಳಷ್ಟೇ ಗಟ್ಟಿಯಾಗಿ ಅವರ ಕಥೆಗಳಲ್ಲಿ ಮೂಡುವುದಿಲ್ಲ. ತನ್ನ ವೈಚಾರಿಕ ಪ್ರಬುದ್ಧ ಪಜ್ಞೆ ಇನ್ನೂ ಸಾಕಷ್ಟು ಆಳವಾದದ್ದಲ್ಲವೇನೋ ಎಂಬುದನ್ನು ಕೂಡ ಈ ಮೂಲಕ ಧ್ವನಿಸುವುದೂ ಕೃಷ್ಣರ ಉದ್ದೇಶವಿರಬೇಕು ಎನ್ನುತ್ತಾರೆ.

ಅವರು ಆಲನಹಳ್ಳಿಯವರ ಸಾಹಿತ್ಯವನ್ನು ಅಷ್ಟೇ ಆತ್ಮೀಯವಾಗಿ ಕೆಲವೊಂದು ವಿಚಾರಗಳಲ್ಲಿ ಒಪ್ಪಿಕೊಳ್ಳುತ್ತಾರೆ. 'ಆಗಂತುಕ' ಕಥೆಯ ದೃಷ್ಟಿಕೋನ 'ತಪ್ತ' ಮತ್ತು 'ನೆಲಗುಮ್ಮ'ಗಳ ಪ್ರಬುದ್ಧ ದೃಷ್ಟಿಕೋನಕ್ಕಿಂತ ಯಾಕೆ ಯಶಸ್ವಿಯಾಗುತ್ತದೆ ಎಂಬುದನ್ನು ಚಿಂತಿಸಬೇಕಾದ ವಿಷಯ, ಶ್ರೀಕೃಷ್ಣರ ಸಾಹಿತ್ಯದಲ್ಲಿ ವೈಚಾರಿಕತೆಯು ನಾವು ನೋಡುವುದಕ್ಕಿಂತ ಹರಿತವಾಗಿಲ್ಲ ಎಂದು ಹೇಳಬಹುದೇ? ಇಂತಹ ಕೆಲವು ಪ್ರಶ್ನೆಗಳನ್ನು ವಿಮರ್ಶಕರಿಗೆ ಹುಟ್ಟುವಂತೆ ಮಾಡಿದ ಇವರ ಸಾಹಿತ್ಯಕ್ಕೆ ಕೃತಜ್ಞತೆಗಳನ್ನು ಹೇಳುತ್ತಾರೆ. ತನ್ನ ನೈಜವಾದ ವ್ಯಕ್ತಿತ್ವದಿಂದಾಗಿ ಶ್ರೀಕೃಷ್ಣಅವರ ಕಲೆಗಾರಿಕೆ ಉತ್ತಮವಾಗಿದೆ ಎಂಬುದನ್ನು ನಾವು ಒಪ್ಪಿಕೊಳ್ಳಬಹುದು ಎಂದು ಅಭಿಪ್ರಾಯ ಪಡುತ್ತಾರೆ.

ಕೆ. ವಿ. ತಿರಮಲೇಶ ಅವರು 'ತಪ್ತ' ಸಂಕಲನವನ್ನು ಕುರಿತು ಬರೆಯುವಾಗ ಈ ಎಲ್ಲಾ ಕಥೆಗಳ ವಸ್ತು ಪ್ರೇಮಭಂಗ, ಕಾಮ, ನಿರಾಸೆ, ಮರಣ, ಬಂಡಾಯ, ವಿಫಲತೆಗಳ ಬಗ್ಗೆ ಹೇಳುವಾಗ ಇದನ್ನು ಅತ್ಯಂತ ಸುಲಭ ರೀತಿಯಲ್ಲಿ ಸಂಗ್ರಹಿಸಿದಂತಾಯಿತು ಎನ್ನುತ್ತಾರೆ. ಏಕೆಂದರೆ ಆ ಕಾಲಕ್ಕಾಗಲೇ ಇಂತಹವುಗಳು ವಿಪುಲವಾಗಿ

ದೊರೆಯುತ್ತಿದ್ದವು ಮತ್ತು ತಪ್ತದಲ್ಲಿ ಫಾರ್ಮುಲಾ ಕಥೆಗಳಿವೆ. ಫಾರ್ಮುಲಾ ಬಿಟ್ಟ ಕಥೆಗಳೂ ಇವೆ ಎನ್ನುತ್ತಾರೆ. 'ಮಣ್ಣಿನ ಹಾಡು' ಕವಿಗೆ ಪ್ರಶಸ್ತಿ ಮತ್ತು ಜನಪ್ರಿಯತೆಯನ್ನು ತಂದುಕೊಟ್ಟಿತು ಎಂದೂ, ವಿಚಾರ ಎಬ್ಬಿಸಿದ್ದು ತುಂಬಾ ಕಡಿಮೆಯೆಂದು ತಪ್ತಕ್ಕೆ ಯು. ಆರ್. ಅನಂತಮೂರ್ತಿ ಅವರು ಬರೆದ ಮುನ್ನುಡಿ ಔಚಿತ್ಯಪೂರ್ಣವಾಗಿದೆ. ಲಿಬರಲ್ ಮನೋಧರ್ಮ ರೂಡಿಸಿಕೊಂಡ ಕನ್ನಡದ ಬೆರಳೆಣಿಕೆ ವಿಮರ್ಶಕರಲ್ಲಿ ಅನಂತಮೂರ್ತಿ ಪ್ರಮುಖರು. ಆಲನಹಳ್ಳಿ ಕಥೆಗಳನ್ನು ಕುರಿತು ಇವರ ಮುನ್ನುಡಿಯು ಇತರ ವಿಮರ್ಶಕರ ಮಟ್ಟಿಗೆ ಮಾರ್ಗದರ್ಶಕವೂ ಆಗಿದೆಯೆನ್ನುತ್ತಾರೆ.

ಈ ಕಥೆಗಳನ್ನೆಲ್ಲಾ ಓದಿದ ಮೇಲೆ ಇಲ್ಲಿ ಯೌವನ ಪೂರ್ವ ಮನೋಧರ್ಮ ಈ ಸಿದ್ಧವಸ್ತುಗಳ ಹಿಂದೆ ಇರುವದರಿಂದಲೇ 'ತಪ್ತ'ದ ಆಕ್ರೋಶ, ಉತ್ಕರ್ಷ, ಉತ್ಸಾಹ, ಸ್ಖಲನಗಳಿಗೆ ಒಂದು ಹಂತದಲ್ಲಿ ಅರ್ಥವಿದೆ. ಇವೆಲ್ಲವೂ ಒಂದು ರೀತಿಯಲ್ಲಿ 'ಮಣ್ಣಿನ ಕಥೆಗಳು' ಅಡಿಗರು ಹೇಳುವಂತಹ ಮಣ್ಣಿನ ವಾಸನೆ ಕೂಡ ಇಲ್ಲಿದೆ. ಆದರೆ ತಾನು ಹುಟ್ಟಿ ಬೆಳೆದ ಮಣ್ಣಿನಿಂದ ದೂರ ಓಡಿಹೋಗಬೇಕೆಂಬ ಛಲ, ಛಲವನ್ನು ಸಾಧಿಸಲಾರದ ವಿಫಲ ಬಂಡಾಯದ ನಿರ್ವೀರ್ಯತೆ ಈ ಕಥೆಗಳ ಪ್ರಧಾನ ವಿಷಯ ಎನ್ನುತ್ತಾರೆ. ಮುಂದುವರೆದು 'ತೊರೆ'ಯ ಪ್ರಭು 'ತಪ್ತ'ದ, 'ಸಂಬಂಧ'ದ 'ನೆಲಗುಮ್ಮ'ದ ನಾಯಕರು ಎಲ್ಲಾ ನಿರುತ್ಸಾಹಕರೇ. ಶ್ರಾವಣದ ಶಕುಂತಳಾ ಮಾತ್ರ ಬಂಡಾಯವೇಳುವ ಸೂಚನೆಯಿದೆ. ಯಾಕೆ ಹೀಗೆ? ಎಂದು ಪ್ರಶ್ನೆ ಮಾಡುವುದು ಸೂಕ್ತವಾಗಿದೆ.

ಈ ಕಥೆಗಳಲ್ಲಿನ ಸಮಸ್ಯೆಗಳ ಬಗ್ಗೆ ಹೇಳುತ್ತಾ ಇದು ಸಾಮಾಜಿಕವಾದದ್ದಲ್ಲ, ಇದೊಂದು ರೀತಿಯಲ್ಲಿ ಮಾನಸಿಕ ಕ್ಷೋಭೆ. ಈ ವ್ಯಕ್ತಿ ಮತ್ತು ಪರಿಸರದ ನಡುವೆ 'ಲವ್-ಹೇಟ್' ಸಂಬಂಧವಿದೆ ಎನ್ನುತ್ತಾರೆ. ಇದಕ್ಕೆ ಹಲವು ಕಥೆಗಳನ್ನು ಉದಾಹರಣೆಯಾಗಿ ನೀಡುತ್ತಾರೆ. 'The Outsider'ನ ನಾಯಕನಿಗೆ ಹೋಲಿಸದರೆ 'ತಪ್ತ'ದ ನಾಯಕ ತಾನು ಪರಕೀಯನೆಂದು ಭ್ರಮಿಸಿಕೊಂಡಿದ್ದಾನೆ. ಇವನು ಪರಕೀಯನಲ್ಲ ಇವನು ಭೂತದಲ್ಲಿ ಬದುಕುತ್ತಾನೆ ಎಂದು ತೌಲನಿಕವಾಗಿ ನೋಡುತ್ತಾರೆ.

ಲೇಖಕರು ಉದ್ದೇಶಿಸದೇ ಇದ್ದ ಕೆಲವು ಪ್ರಶ್ನೆಗಳು ನನ್ನಂತಹ ಓದುಗರಲ್ಲಿ ಮೂಡುವುದು ಸಾಧ್ಯ ಎನ್ನುತ್ತಾರೆ. " ಏಕೆ ತಪ್ತರೆಲ್ಲಾ ಭೂತಕ್ಕೆ ಮರಳುತ್ತಾರೆ ಅಥವಾ ಭೂತದಿಂದ ತಪ್ಪಿಸಿಕೊಳ್ಳಲಾರರೋ? ಪರಿಸರದ ವಿರುದ್ಧ ಇವರ ಬಂಡಾಯವೆಲ್ಲಾ ಕೇವಲ ಕಲ್ಪನೆಯಲ್ಲೇ ಕೊನೆಗೊಳ್ಳುವುದೇ? ಇವರು ಯಾಕೆ ಸ್ವತಂತ್ರ ವ್ಯಕ್ತಿತ್ವಗಳನ್ನು ರೂಪಿಸಿಕೊಳ್ಳುವುದಕ್ಕೆ ಅಸಮರ್ಥರು? ಪರಿಸರಕ್ಕಿಂತಲೂ ಇವರೆಲ್ಲರೂ ದುರ್ಬಲರಾಗಿರುವುದೇಕೆ? ಇಂತಹ ಪ್ರಶ್ನೆಗಳು ಕಥೆಗೆ ಹೊರತೆಂದು ತೋರುವುದಾದರೂ ಇದನ್ನ ಲೇಖಕರು ಉತ್ತರಿಸಲಾರದಿದ್ದರಿಂದಲೇ ಈ ತಪ್ತರ ಹೋರಾಟದಲ್ಲಿ ನಾವು ಕೆಲವೊಮ್ಮೆ ಭಾಗಿಗಳಾಗುವುದು ಸಾಧ್ಯವಾಗದೇ ಹೋಗುತ್ತದೆ ಎನ್ನುತ್ತಾರೆ. ಮತ್ತು ಇವರ ಯೌವನದಲ್ಲಿ ಸತ್ವವಿಲ್ಲದಿರುವುದು, ಜನರನ್ನು ಎರಡಾಗಿ 'ಶ್ರಾವಣ'ದ ಶಕುಂತಳಾ ಮತ್ತು ಅವಳನ್ನು ವಂಚಿಸಿದ ವ್ಯಕ್ತಿ 'ತೊರೆ'ಯ ಲಕ್ಷ್ಮಿ - ಪ್ರಭುವಿನ ಅಣ್ಣ, 'ಸಂಬಂಧ'ದ ಲಲಿತ ಅವಳ - ರಕ್ಕಸ ಗಂಡ"[9] ಹೀಗೆ ವಿಂಗಡಿಸುತ್ತಾ ಹೋಗುತ್ತಾರೆ ಎಂಬುದನ್ನು ಓದುಗರಿಗೆ ಸೂಚಿಸುತ್ತಾರೆ.

ಇದಲ್ಲದೆ ಕೆ. ವಿ. ತಿರಮಲೇಶ್ ಅನಂತಮೂರ್ತಿಯವರನ್ನು ಪ್ರಸ್ತಾಪಿಸುತ್ತಾ ಆಲನಹಳ್ಳಿ ಕಥೆಗಳ ಕಾವ್ಯಶಿಲ್ಪ, ಕಾವ್ಯಮಯನಾದ ಭಾಷೆಯ ಬಳಕೆಯನ್ನು ಕೆಲವು ಕಥೆಗಳಲ್ಲಿ ದೊರೆಯುವ ಸ್ವಗತ ರೂಪದ ನಿರೂಪಣೆ, ಕಾವ್ಯಶೈಲಿಯ, ಪದ್ಯಶೈಲಿಯಲ್ಲಿ ಕೊನೆಗೊಳ್ಳವು ಗೀಳು ಲೇಖಕರಿಗಿದೆ. ಮತ್ತು ಆಲನಹಳ್ಳಿಯ ಕಾವ್ಯತನ್ಮಯತೆಗೆ ಕಾರಣ ಅವರ ಭಾವಾತಿರೇಕತೆ. ತಾನೇ ಕಥಾನಾಯಕನಾಗಿದ್ದುಕೊಂಡು ಸ್ವತಃ ದುಃಖಾಲಾಪ, ಸ್ವಾನುಕಂಪದಲ್ಲಿ ಋಷಿಪಡುವ ಸರ್ವೇಸಾಮಾನ್ಯ ಪ್ರವೃತ್ತಿಯಷ್ಟೇ ಈ ಕಥೆಗಳ ಹಿಂದಿನ ಪ್ರೇರಣೆಯಾದ್ದರಿಂದಲೇ ಕೃತಕತೆ ತಲೆಹಾಕುತ್ತದೆ. ಆದರೆ ಒಬ್ಬ ಅತ್ಯುತ್ತಮ ಕಥೆಗಾರನಿಗೆ ಮಾತ್ರ ಕಥೆ ಬರೆಯುವಾಗ ನಿರೂಪಣೆಲ್ಲೂ ಕಾವ್ಯದ ನಿರೂಪಣೆ ಸಾಧ್ಯ ಎನ್ನುವುದನ್ನು ಮರೆಯುವಂತಿಲ್ಲ.

ಈ ವಿಮರ್ಶಕರು ಇಷ್ಟೆಲ್ಲಾ ಹೇಳಿದರೂ 'ತಪ್ತ' ಸಂಕಲನವನ್ನು ಕುರಿತು ಮೆಚ್ಚುಗೆಯ ಮಾತುಗಳನ್ನು ಹೇಳುತ್ತಾರೆ. "ಓದಿದಾಗ ಏನೂ ಅನಿಸದಂಥ ಕೃತಿ 'ತಪ್ತ' ಖಂಡಿತಾ ಅಲ್ಲ. ಇದು ನಮ್ಮ ಮಾಮೂಲು ಸಂವೇದನೆಗಳನ್ನು ಹುಡುಕುತ್ತದೆಯಾದರೂ ಅಷ್ಟೇನೇ ಅಲ್ಲ, ಇನ್ನೇನನ್ನೋ ಹೇಳಲು ಆಲನಹಳ್ಳಿ ಅವರ ಕಥೆಗಳು ಪ್ರಯತ್ನಿಸುತ್ತವೆ ಅನಿಸುತ್ತದೆ. ಹೇಳುವ ಭಾವಾವೇಗದಲ್ಲಿ ಹೇಳಬೇಕಾದ್ದು ತೆಳುವಾಗಬಾರದೆಂಬುದು ಮುಖ್ಯ. ಒಟ್ಟಾರೆ ಮೇಲಿನಿಂದ ಯುವಕರ ಮನಸ್ಸಿಗೆ ಇನ್ನಿತರ ಓದುಗರಿಗೆ ನೋಸ್ಟಾಲ್ಜಿಯಾ ಪ್ರವೃತ್ತಿಗೆ ಹಿಡಿಸುವಂಥ ಕಥೆಗಳು"[3] ಎನ್ನುತ್ತಾರೆ.

ಹೆಚ್. ಎಸ್. ರಾಘುವೇಂದ್ರರಾವ್ ಅವರು ಭುಜಂಗಯ್ಯನ ಪಾತ್ರ ಸೃಷ್ಟಿಯ ಬಗ್ಗೆ ಕೆಲವು ವಿಚಾರಗಳನ್ನು ಮಂಡಿಸುತ್ತಾರೆ. ಇವರ ಅಭಿಪ್ರಾಯದಲ್ಲಿ ಕನ್ನಡ ಕಾದಂಬರಿ ಸಾಹಿತ್ಯದಲ್ಲಿ ಸಿಗುವ ಪಾತ್ರಗಳಿಗಿಂತ ಭುಜಂಗಯ್ಯನ ಪಾತ್ರವನ್ನು ಭಿನ್ನವಾದದ್ದು ಎಂದಿದ್ದಾರೆ. "ಕಾದಂಬರಿ ಸ್ವರೂಪದ ಮೇಲೆ ನಿರ್ಣಾಯಕವಾದ ಪ್ರಭಾವವನ್ನು ಬೀರದೆ ನಮಗೆ ಪರಿಚಿತವಾಗಿರುವ ಕಾದಂಬರಿ ಬಂಧದಲ್ಲಿ ದೋಷಗಳೆಂದು ತೋರುವ ಕೆಲವು ಲಕ್ಷಣಗಳು ಬೇರೆ ದೃಷ್ಟಿಕೋನದಿಂದ ನೋಡಿದಾಗ ಸಮರ್ಪಕವೆಂದು ಸಾಬೀತಾಗುತ್ತದೆ" ಎಂದು ಹೇಳುತ್ತ ಕಾದಂಬರಿಗಳನ್ನು ಹಲವು ದೃಷ್ಟಿಕೋನಗಳಿಂದ ನೋಡಿದಾಗಲೇ ಅದರ ಮಹತ್ವ ಗೊತ್ತಾಗುತ್ತದೆ ಎಂಬುದನ್ನು ಸೂಕ್ಷ್ಮವಾಗಿ ತಿಳಿಸುತ್ತಾರೆ. ಇವರ ಪ್ರಕಾರ ಭುಜಂಗಯ್ಯನ ಪಾತ್ರವನ್ನು ಇತರ ಪಾತ್ರಗಳು ಪೋಷಿಸುತ್ತಾ ಬರುತ್ತವೆ. ಊರ ಜನರ ಪ್ರತಿಕ್ರಿಯೆಗಳು, ಸುಶೀಲೆಯ ಮನೋಭಾವ ಮತ್ತು ಅದಕ್ಕಿಂತ ಹೆಚ್ಚಾಗಿ ರಾಜನ ಗ್ರಹಿಕೆಯಲ್ಲಿ ಭುಜಂಗಯ್ಯನ ವ್ಯಕ್ತಿತ್ವ ಬೆಳೆಯುತ್ತಾ ಹೋಗುತ್ತದೆ ಎಂದು ಇದಕ್ಕೆ ಕಾದಂಬರಿಯಲ್ಲಿ ದೊರೆಯುವ ವಿಚಾರಗಳನ್ನೂ ಹೇಳುತ್ತಾ ಸಮರ್ಥಿಸುತ್ತಾರೆ. ಕಥನ ಕೃತಿಯಲ್ಲಿ ಪಾತ್ರದ ರಚನೆಯು ಎರಡು ರೀತಿಯಲ್ಲಿ ನಡೆಯುತ್ತದೆ. 'ನಿರ್ದಿಷ್ಟ ಗುಣ'ಗಳನ್ನು ಈಗಾಗಲೇ ತನ್ನ ಸ್ವಭಾವದ 'ಘಟಕ'ಗಳಾಗಿ ಹೊಂದಿರುವ 'ಸಿದ್ಧಪಾತ್ರ'ವೊಂದು ತಾನು ಎದುರಿಸುವ ಸನ್ನಿವೇಶಗಳಿಗೆ 'ಪೂರ್ವ ನಿರ್ಧಾರಿತ'ವಾದ ರೀತಿಯಲ್ಲಿ ಒತ್ತಡದೊಳಗೆ ಕೆಲಸಮಾಡುತ್ತಾರೆ. ಭುಜಂಗಯ್ಯ ಎರಡನೇ ಬಗೆಯ ಪಾತ್ರ. ಅವನು ಕ್ರಿಯೆಯಲ್ಲಿ ಸಂಭವಿಸುತ್ತಾ ಹೋಗುವ ಪಾತ್ರವೇ ವಿನಹಾ ಘಟನೆಗಳಿಗೆ ಪ್ರತಿಕ್ರಿಯಿಸುತ್ತಾ ಹೋಗುವ 'ಗುಣ ಸಮಗ್ರ'ವಲ್ಲ"[4] ಎನ್ನುತ್ತಾರೆ. ಆದರೆ ಕಾದಂಬರಿಯಲ್ಲಿ ನಡೆಯುವ ಘಟನೆಗಳಿಗೆ ಭುಜಂಗಯ್ಯ ಬದಲಾಗುತ್ತಾ ಹೋಗುತ್ತಾನೆ ಎನ್ನುವ ಇನ್ನೊಂದು ದೃಷ್ಟಿಕೋನವೂ ಇದೆ. ಅದಕ್ಕಾಗಿಯೇ ಅವನಾಗಲೇ ನಗರ ಜೀವನವನ್ನು ಬಾಲ್ಯದಲ್ಲಿ ಕಂಡಿದ್ದರೂ ಕೃಷಿಕನಾಗುತ್ತಾನೆ. ಅನಿಶ್ಚಿತ ಮಳೆ, ಬರಗಾಲದ ಘಟನೆ ಸಂಭವಿಸಿದಾಗ ಅವನು ಹೋಟೆಲ್ ಇಡುವ ವಿಚಾರ ಮಾಡುತ್ತಾನೆ. ಅಷ್ಟೇ ಅಲ್ಲದೆ ಹೋಟೆಲ್‌ನ ದುರಂತದಿಂದಲೇ ಇವನು ಇನ್ನೊಂದು ದಿನಸಿ ವ್ಯಾಪಾರವನ್ನು ಪ್ರಾರಂಭಿಸುತ್ತಾನೆ. ಹೋಟೆಲ್‌ನ ದುರಂತ ಸಂಭವಿಸದೇ ಇದ್ದರೆ ಹೋಟೆಲ್ ಅನ್ನೇ ಮುಂದುವರೆಸಿಕೊಂಡು ಹೋಗುವ ಸಾಧ್ಯತೆ ಕಾದಂಬರಿಯಲ್ಲಿದೆ ಎಂಬುದನ್ನು ಗ್ರಹಿಸಬಹುದು. ಮುಂದುವರೆದು ಇವರು ಸರಳವಾಗಿ ಹೇಳುವುದಾದರೆ ಭುಜಂಗಯ್ಯನೆಂದರೆ ಅವನ ಬದುಕಿನ ಬೇರೆ ಬೇರೆ ಸಂದರ್ಭಗಳಲ್ಲಿ ತೊಡಗಿಕೊಳ್ಳಲು ಕ್ರಿಯೆಗಳ ಮೊತ್ತವೇ ಹೊರೆತು ಬೇರೇನೂ ಅಲ್ಲ. ಪ್ರತಿಯೊಂದು ಹಸ ಸನ್ನಿವೇಶವೂ ಅವನ ಪಾತ್ರಕ್ಕೆ ಒಂದು ಮಗ್ಗುಲನ್ನು ಜೋಡಿಸುತ್ತದೆ ಎನ್ನುತ್ತಾರೆ.

ಮಾಧವ ಕುಲಕರ್ಣಿಯವರು 'ಪರಸಂಗದ ಗೆಂಡೆತಿಮ್ಮ' ಕಾದಂಬರಿಯನ್ನು ಕುರಿತು ಇತರ ವಿಮರ್ಶಕರಿಗಿಂತ ಬೇರೆ ರೀತಿಯಲ್ಲಿ ನೋಡುತ್ತಾರೆ. ಪರಸಂಗದ ಗೆಂಡೆತಿಮ್ಮ ಒಂದು ದಂತಕಥೆಯಾಗುವ ಹಲವು ಸಾಧ್ಯತೆಗಳನ್ನು ಇವರು ಹೇಳುತ್ತಾರೆ. ಮೊದಲನೆಯದಾಗಿ ಇದು ಯಾವ ಕಾಲದಲ್ಲಿ ನಡೆದಿದೆಯೋ ಎಂಬುದನ್ನು ತಿಳಿಯದೇ ಯಾವ ಕಾಲಕ್ಕೆ ಬೇಕಾದರೂ ಓದಿಕೊಂಡರೂ ಅದಕ್ಕೆ ಹೊಂದಿಕೊಂಡು ಕಾಲದ ಮಿತಿಗೆ ಒಳಪಡದ ಕಾದಂಬರಿಯಾಗಿದೆ. ಹಾಗೂ ಇದರ ದುರಂತವೂ ಕಥೆ ಹೇಳುವಂತೆ ಕೊನೆಯಾಗುತ್ತದೆ. ಅದೇನೆ ಆದರೂ ಈ ಕಾದಂಬರಿಯನ್ನು ನೋಡುವ ಈ ದೃಷ್ಟಿಕೋನವೂ ಉಚಿತವಾಗಿದೆ.

ಈ ಲೇಖನದಲ್ಲಿ ಮರಂಕಿಯನ್ನು ನೋಡುವ ರೀತಿ ಬೇರೆಯೇ ಆಗಿದೆ. ಪರಿವಾರದ ಇತರ ಹೆಣ್ಣುಗಳಂತೆ ಇರದೆ ಈಕೆ ಬೇರೆಯಾಗುವುದರ ಬಗ್ಗೆ ವಿವರಗಳನ್ನು ಒದಗಿಸುತ್ತಾ ನೈತಿಕತೆಯ ತಿಳುವಳಿಕೆ ಇರದೆ ಮರಂಕಿ

ತಪ್ಪು ಮಾಡುತ್ತಾಳೆ ಎಂದು ಹೇಳುತ್ತಾರೆ. ಪಾತ್ರಗಳು ಆ ದೃಷ್ಟಿಯಿಂದಲೇ ಅಂತರ್ಮುಖಿಗಳಾಗುವುದಿಲ್ಲ ಎಂದು ಹೇಳುವುದು ವಂತ ಕಥೆಯ ರೀತಿಯಲ್ಲಿ ಕಥೆ ನಡೆಯುತ್ತದೆ ಎಂಬುದಕ್ಕೆ ಪೂರಕವಾಗಿ ನೋಡಬಹುದು ಎನ್ನುತ್ತಾರೆ.

ಆದರೆ ಇವರು ಬಾಲಕ ಮುದ್ದನನ್ನು ಒಂದು ಪ್ರತಿಮೆಯ ರೀತಿಯಲ್ಲಿ ಗೆಂಡೆತಿಮ್ಮನ ಅಂತರಂಗಕ್ಕೆ ಸಮೀಕರಿಸಿ ಹೇಳುವ ಪ್ರಯತ್ನ ಉಚಿತವಾದದ್ದಲ್ಲ ಎಂದು ಹೇಳಬಹುದು. ಏಕೆಂದರೆ ಒಂದು ಸ್ವತಂತ್ರ ಪಾತ್ರವಾಗಿ ಮೂಡಿ ಬರುವ ಎಲ್ಲಾ ಅರ್ಹತೆಗಳೂ ಇದ್ದಾಗಲೂ ಅದನ್ನು ಈ ರೀತಿ ಅರ್ಥೈಸಿದರೆ ಒಂದು ಪಾತ್ರಕ್ಕೆ ನ್ಯಾಯ ದೊರಕಿಸಿದಂತೆ ಆಗುವುದಿಲ್ಲ. ಮುದ್ದನನ್ನು ಇತರ ಕಾದಂಬರಿಗಳಲ್ಲಿ ಬರುವ ಬಾಲಕ ಪಾತ್ರದಂತೆಯೇ ನೋಡಿದಾಗ ಆಲನಹಳ್ಳಿಯವರು ಈ ಪಾತ್ರಗಳನ್ನು ವೈವಿಧ್ಯಮಯವಾಗಿ ಬಳಸಿರುವುದು ಕಂಡುಬರುತ್ತದೆ.

ಗೆಂಡೆತಿಮ್ಮನನ್ನು ಈ ಲೇಖಕರು ಗ್ರಹಿಸುವ ಕ್ರಮ ಅರ್ಥಪೂರ್ಣವಾದದ್ದು. "ಇವನು ಸಾಮಾಜಿಕ ಅವಮಾನವನ್ನು ಸಹಿಸುವವನಾಗಿದ್ದರೂ ತನ್ನ ನೆಲೆಯಾಗಿರುವ ಹೆಂಡತಿ ಮರಂಕಿಯ ಅಭದ್ರತೆ ಗೊತ್ತಾದ್ದರಿಂದಲೇ ಅವನು ಸಾವನ್ನಪ್ಪುತ್ತಾನೆ."[೪] ಎಂದಿದ್ದಾರೆ. ಆದರೆ ಈ ಅಭದ್ರತೆಗೆ ಗೆಂಡೆತಿಮ್ಮನೂ ಕಾರಣನಾಗುವುದನ್ನು ಮಾತ್ರ ಇವರು ಮರೆಯುತ್ತಾರೆ. ಮೊದಲಿದ್ದ ಆಸಕ್ತಿ ಕಡಿಮೆಯಾದದ್ದು ಈ ಅಭದ್ರತೆ ಮತ್ತು ದುರಂತಕ್ಕೆ ಕಾರಣವಾಗುತ್ತದೆ. ಏನೇ ಆದರೂ ಮಾಧವ ಕುಲಕರ್ಣಿ ಅವರು ಬೇರೆ ವಿಮರ್ಶಕರಿಗಿಂತ ಭಿನ್ನವಾಗಿ ಈ ಕಾದಂಬರಿಯನ್ನು ನೋಡಿದ್ದಾರೆ.

ಡಾ. ಗಿರಡ್ಡಿಗೋವಿಂದ ರಾಜು ಅವರು 'ಕಾಡು' ಕಾದಂಬರಿಯ ಬಗ್ಗೆ ಬರೆಯುವಾಗ ಆಲನಹಳ್ಳಿ ಅವರು ಬಳಸುವ ಭಾಷೆ ಮತ್ತು ತಂತ್ರದ ಬಗ್ಗೆ ಹೇಳುತ್ತಾ ಹೋಗುತ್ತಾರೆ. ಕಿರಿಯ ಮುಗ್ಧ ಬಾಲಕರ ಮೂಲಕ ಕಾದಂಬರಿಯನ್ನು ನೋಡುವುದು ಕಾದಂಬರಿಯ ಪ್ರಚಲಿತ ತಂತ್ರವಾಗಿದ್ದು ಎಲ್ಲಾ ಪಾತ್ರಳನ್ನು ಕಿಟ್ಟಿ ಪಾತ್ರದ ಮೂಲಕ ನೋಡಲಾಗಿದೆ. ಇಲ್ಲಿ ಕಿಟ್ಟಿಯೇ ಕೇಂದ್ರ ಬಿಂದು. ಈ ಕಾದಂಬರಿಯಲ್ಲಿ ಅದನ್ನು ಸಮರ್ಥವಾಗಿ ಬಳಸಿಕೊಂಡಿರುವುದನ್ನು ಈ ಕಿರು ಲೇಖನದಲ್ಲಿ ಹೇಳಿದ್ದಾರೆ.

ಡಾ. ಕೆ. ವಿ. ನಾರಾಯಣ ಅವರು 'ಭುಜಂಗಯ್ಯನ ದಶಾವತಾರ: ನಾಯಕನಿಗಾಗಿ ಶೋಧ' ಎಂಬ ಲೇಖನದಲ್ಲಿ ಕೇವಲ ನಾಯಕನಿಗಾಗಿ ಶೋಧ ಮಾಡದೇ ಕಾದಂಬರಿಯು ಇತರ ಪಾತ್ರಗಳನ್ನೂ ಘಟನೆಗಳನ್ನೂ ತಮ್ಮ ಗ್ರಹಿಕೆಯ ನೆಲೆಯಲ್ಲಿ ವಿವರಿಸುತ್ತಾರೆ. ಕಾದಂಬರಿಯ ಘಟನೆಗಳು ತಾವೇ ತಾವಾಗಿ ನಡೆಯುವುದಿಲ್ಲ. ಆ ಘಟನೆಗಳು ಇದ್ದಾಗಲೂ ಅವುಗಳು ಅಲ್ಲಿ ಆಗುವುದನ್ನೇ ಕಾದಂಬರಿ ನಿರೀಕ್ಷಿಸುತ್ತದೆ ಎಂದು ಹೇಳುತ್ತಾರೆ. ಆದರ್ಶವನ್ನು ಮಾನವೀಯತೆಯನ್ನು ಮೆರೆಯುವ ಭುಜಂಗಯ್ಯ ಸತ್ತು ಸಮುದಾಯದಲ್ಲಿ ದೇವತೆಯಾಗಿ ಬಿಡುತ್ತಾನೆ ಎಂದು ಹೇಳುತ್ತಾ "ನಾಯಕನ ಸಾವು ವ್ಯಕ್ತಿಯೊಬ್ಬನ ಸಾವಿನಂತೆ ಕೊನೆಗೊಳ್ಳುವುದಿಲ್ಲ. ಬದಲಾಗಿ ಅದು ಸಮಷ್ಟಿಯ ಚೈತನ್ಯದ ಭಾಗವಾಗುತ್ತದೆ. ಅವನ ಸಾವು ತಂದ ಅಳಲು ಕಟ್ಟಿದ ಮೋಡಗಳಿಂದ ಸೋಯೆಂದು ಮಳೆಯಾಗಿ ಸುರಿಯತೊಡಗುತ್ತದೆ."[೫] ಇವರು ಸಮಷ್ಟಿ ಪ್ರಜ್ಞೆಯಲ್ಲಿ ನಾಯಕನನ್ನು ನೋಡುತ್ತಾರೆ. ಕಾದಂಬರಿ ಬಳಸಿಕೊಂಡಿರುವ ವಿವರಗಳನ್ನು ವಿಶ್ಲೇಷಿಸುತ್ತಾ ಹೇಗೆ ಹಲವು ವಿವರಗಳು ಕಾದಂಬರಿಯ ಒಡಲಿನಲ್ಲಿ ಸೇರಿದಾಗ ಅದು ಮಹತ್ವವನ್ನು ಪಡೆದುಕೊಳ್ಳುತ್ತದೆ ಎಂಬುದನ್ನು ಇವರ ಲೇಖನದಲ್ಲಿ ನೋಡಬಹುದು.

ಕಾದಂಬರಿಯಲ್ಲಿರುವ ಸಾಮಾಜಿಕ ಪರಿವರ್ತನೆ ಅಥವಾ ಪಲ್ಲಟಕ್ಕೆ ಹೊರಗಿನ ಪ್ರಭಾವ ಭುಜಂಗಯ್ಯನ ದಶಾವತಾರಗಳು ಕಾದಂಬರಿಯ ಸಮಕಾಲೀನ ಕಾದಂಬರಿಗಳಲ್ಲಿ ಹೆಚ್ಚಾಗಿ ಕಂಡುಬಂದಿದ್ದು ಹಳ್ಳಿಗಳ ಸಾಂಸ್ಕೃತಿಕ ಅಭದ್ರತೆ ಕುಸಿಯುವಂತಾಗಿರುವುದನ್ನು ಈ ಕಾದಂಬರಿಯಲ್ಲಿ ಮತ್ತು ಗೆಂಡೆತಿಮ್ಮ ಕಾದಂಬರಿಯಲ್ಲಿ ಕಾಣಬಹುದಾದ ಸಾಧ್ಯತೆಯನ್ನು ಹೇಳುತ್ತ ನೆಲದೊಡನೆ ಸಂಪರ್ಕ ಹೊಂದಿದ್ದ ವ್ಯಕ್ತಿ ಹೋಟೆಲ್, ಅಂಗಡಿ ವ್ಯಾಪಾರ ಮಾಡಿ, ರಸ್ತೆ ಕಾಮಗಾರಿ ನಡೆಸಿ ದೂರವಾಗುವಂತೆ ಮಾಡಿದ್ದು ಹೀಗೆ ಹೊರಗಿನಿಂದ ಬಂದ ಸಾಮಾಜಿಕ ಪರಿವರ್ತನೆಯ ಶಕ್ತಿಗಳೇ ಸರಿ. ಅದೇ ಅವು ಪಾರಂಪರಿಕ ಸಮಾಜದ ಒಡಲಿನಲ್ಲೇ ದೂರವಾಗುತ್ತಾ ನಡೆದದ್ದೇ ಭುಜಂಗಯ್ಯನ ವಿನಾಶಕ್ಕೆ ಕಾರಣವಾಯಿತೆಂದು ಹೇಳುವುದು ನೈತಿಕ ನ್ಯಾಯವಾದೀತು."[೬]

ಪ್ರೊ. ರಹಮತ್ ತರೀಕೆರೆ ಅವರು ತಮ್ಮ ವಿಮರ್ಶಾ ಲೇಖನದಲ್ಲಿ ಆಧುನಿಕತೆ ಅಂದರೇನು ಎಂಬುದನ್ನು ಆಲನಹಳ್ಳಿ ಸಾಹಿತ್ಯದ ಮುಖೇನ ನೋಡಲು ಪ್ರಯತ್ನಿಸಿದ್ದಾರೆ. ವಸಹಾತುಶಾಹಿ ಆಧುನಿಕತೆ ಎನ್ನುವುದನ್ನು ಬೌದ್ಧಿಕ ಮತ್ತು ಭೌತಿಕವಾದದ್ದು ಎಂದು ಅರ್ಥಪೂರ್ಣವಾಗಿಯೇ ವಿವರಿಸಿದ್ದಾರೆ. ಇವರು ಆಧುನಿಕತೆಯನ್ನು ಹೇಳುವಾಗ ಅದು ಭಾರತದಂತಹ ದೇಶದಲ್ಲಿ ಉಂಟುಮಾಡಿದ ಬದಲಾವಣೆಯನ್ನು ವಿವರಿಸುತ್ತಾರೆ. ಪೂರ್ವದಿಂದಲೂ ನಡೆದುಕೊಂಡು ಬಂದಿದ್ದ ಎಷ್ಟೋ ವಿಚಾರಗಳು ನಂಬಿಕೆಗಳು ಇವರಿಂದ ಬದಲಾದವು. ಸ್ವತಂತ್ರ, ಸಮಾನತೆ, ಹಕ್ಕುಗಳು ಮುಂತಾದವುಗಳು ಗ್ರಾಮೀಣ ಪ್ರದೇಶದಲ್ಲಿ ರೂಢಿಗೆ ಬಂದವು. ವಿಜ್ಞಾನದ ಪ್ರಭಾವವೂ ಇದಕ್ಕೆ ಪೂರಕವಾಗಿ ಪ್ರತಿಕ್ರಿಯಿಸಿದೆ. ಒಂದು ವೇಳೆ ವಸಾಹತುಶಾಹಿ ಆಧುನಿಕತೆ ಬರದೇ ಇದ್ದಲ್ಲಿ ಇಂದಿಗೂ ಮೂಲಭೂತ ಬದಲಾವಣೆಗಳು ಸಾಧ್ಯವಾಗುತ್ತಿರಲಿಲ್ಲ ಎಂಬುದು ಗೋಚರಿಸುತ್ತದೆ. ಅಂತಹ ಹಲವು ಬದಲಾವಣೆಗಳನ್ನು ಈ ಲೇಖನದಲ್ಲಿ ಗುರ್ತಿಸಿದ್ದಾರೆ. ಬಡವರು, ಕೆಳವರ್ಗದವರು, ಸ್ತ್ರೀಯರು, ಗುಲಾಮರು ಮುತಾದವರಿಗೆ ಈ ಆಧುನಿಕ ಪದ್ಧತಿ ಪೂರಕವಾಗಿಯೇ ಬಳಕೆಗೆ ಬಂದಿದೆ ಎಂಬುದನ್ನು ಹಲವು ಲೇಖಕರ ಕತೆ-ಕಾದಂಬರಿಗಳ ಉದಾಹರಣೆಯ ಮೂಲಕ ಹೇಳುತ್ತಾರೆ. ಇದು ಅತ್ಯಂತ ಸಮರ್ಥವೂ ಹೌದು. ಮತ್ತೆ ಮತ್ತೇ ಕೆಲವು ಕಡೆ ಆಧುನಿಕತೆಯ ಪ್ರಭಾವದಿಂದ ಆಗುವ ಅಭಾಸ ಮತ್ತು ಅನಾನುಕೂಲತೆಯನ್ನೂ ಸಹ ಗುರ್ತಿಸಿದ್ದಾರೆ. ಜನಪದ ಸಂಸ್ಕೃತಿ ನಾಶವಾಗುತ್ತಿರುವುದು, ಪ್ರಾದೇಶಿಕ ಭಾಷೆ ಅಥವಾ ಸಂಸ್ಕೃತಕ್ಕೆ ಬದಲಾಗಿ ಇಂಗ್ಲಿಷ್ ಬಂದದ್ದು ಮುಂತಾದವು.

ಆಲನಹಳ್ಳಿ ಅವರ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಆಧುನಿಕತೆಯ ಹಲವು ದೋಷಗಳನ್ನು ಇವರ ಕತೆ ಕಾದಂಬರಿಗಳಲ್ಲಿ ಗುರ್ತಿಸುತ್ತಾ ಹೋಗುತ್ತಾರೆ. ಭುಜಂಗಯ್ಯನನ್ನು ಆಧುನಿಕನಂತೆ ಚಿತ್ರಿಸುವ ಇವರು ಇವನನ್ನು ಪೂರ್ಣವಾಗಿ ಆಧುನಿಕನನ್ನಾಗಿ ಮಾಡದೇ ಇವನಲ್ಲಿ ಹಲವು ಸಂಪ್ರದಾಯಗಳು, ಪರಮಾಡುವುದು, ಶಾಸ್ತ್ರಕೇಳುವುದು, ಕಟ್ಟುಮಾಡಿಸುವುದು ಮುಂತಾದವುಗಳನ್ನು ಬಿಂಬಿಸಿರುವುದು ವಿಚಿತ್ರವಾಗಿದೆ. ವಿದ್ಯಾವಂತರಾದರೂ ಇವರ ಸಣ್ಣಕತೆಗಳಲ್ಲಿ ಬರುವುದೆಲ್ಲವೂ ಆಧುನಿಕತೆಯನ್ನು ಒಪ್ಪಿಕೊಂಡ ಯುವಕರ ಕಾಮದ ಸೆಳೆತ ಎನ್ನುತ್ತಾರೆ. ಆಧುನಿಕತೆಯನ್ನು ಭುಜಂಗಯ್ಯ, ಮರಂಕಿ, ಗೆಂಡೆತಿಮ್ಮ ಇವರು ನೋಡುವುದಕ್ಕಿಂತಲೂ ಭಿನ್ನವಾಗಿ ನೋಡಿರುವ ವಿವಿಧ ಲೇಖಕರ ಅಭಿಪ್ರಾಯಗಳನ್ನು ಹೇಳುತ್ತಾ ಮರಂಕಿ ಗ್ರಾಮಫೋನನ್ನು ತಂದಿದ್ದರಿಂದ ಕುಟ್ಟುವ, ಬೀಸುವ, ಹಾಡುಗಳನ್ನು ಹಾಡುವವರು ಕಡಿಮೆಯಾದದ್ದು, ಹಾಡಲು ನಾಚುವುದರಿಂದ ಇವುಗಳು ನಾಶವಾದವು. ಭುಜಂಗಯ್ಯ ಪಾರ್ವತಿಯ ಭಾಷೆಗೆ ಹೇಸಿಗೆ ಪಡುವುದು, ಮುದ್ದೆಗಿಂತಲೂ ಅನ್ನವನ್ನು ಬಯಸುವುದು ಮುಂತಾದವು ವಿರೋಧಾಭಾಸವಾಗಿದೆ ಎನ್ನುತ್ತಾರೆ. ಆದರೇ ಆಲನಹಳ್ಳಿಯವರ ಕತೆ ಕಾದಂಬರಿಗಳು ಸ್ಥಿತ್ಯಂತರಗೊಳ್ಳುತ್ತಿರುವ ಮೊದಲ ಘಟ್ಟವನ್ನು ಚಿತ್ರಿಸಿರುವುದರಿಂದ ಸಂಪ್ರದಾಯವನ್ನು ಪೂರ್ಣವಾಗಿ ತೆಗೆದು ಹಾಕಲು ಸಾಧ್ಯವಾಗುವುದಿಲ್ಲ. ಏಕೆಂದರೆ ಈ ಸಂಕ್ರಮಣ ಸ್ಥಿತಿಯಲ್ಲಿ ಸಂಪ್ರದಾಯ ಮತ್ತು ಆಧುನಿಕತೆ ಎರಡಕ್ಕೂ ಪ್ರಭಲವಾದ ವಿರೋಧವೇ ಇರುತ್ತದೆ. ಆಧುನಿಕ ಶಿಕ್ಷಣ ಮತ್ತು ನಗರೀಕರಣಗಳು ಹಳ್ಳಿಗಳನ್ನು 'ಬಿಸಿಲು ಮಳೇಲಿ ವನವಾಸ' ಮಾಡಿ ಸಾಯುವ, ಪೇಟೆಗಳನ್ನು 'ಕೂತ್ಕಂಡು' ಉಣ್ಣುವ ತಾಣಗಳಾಗಿ ಅಂದರೆ ಶ್ರಮ ವಿರೋಧಿ ಸಂಸ್ಕೃತಿಯನ್ನು ಬೆಳೆಸಿದ್ದು ತುಂಬ ಕೆಟ್ಟ ಬೆಳವಣಿಗೆಯಾಗಿದೆ." ಎಂದಿದ್ದಾರೆ.

ಕಾದಂಬರಿಗಳಲ್ಲಿ ಕೃಷಿ ಬದುಕನ್ನು ಕೀಳಾಗಿ ಕಾಣಬಹುದಿತ್ತು. ಆದರೇ ಕಾದಂಬರಿಕಾರ ಅದನ್ನು ಆ ರೀತಿಯಲ್ಲಿ ಹೇಳದೇ ಜೀವನಾಧಾರದಂತೇ ಚಿತ್ರಿಸಿದ್ದಾರೆ. ಆದ್ದರಿಂದಲೇ ಗೆಂಡೆತಿಮ್ಮದಲ್ಲಿ ಧಾನ್ಯಗಳ ಮೂಲಕವೇ ವ್ಯವಹಾರಗಳು ನಡೆಯುತ್ತಿರುತ್ತವೆ. ಭುಜಂಗಯ್ಯ ಆಧುನಿಕತೆಯನ್ನು ಬಯಸುವುದು ಅರೆಹೊಟ್ಟೆ, ಹಸಿವು, ಬಡತನ, ಬರಗಾಲ, ಅನಿಶ್ಚಿತ ಮಳೆ ನಿರೀಕ್ಷೆಯನ್ನು ಸುಳ್ಳಾಗಿಸುವ ಉತ್ಪಾದನೆ ಇವುಗಳೇ ಕಾರಣವಾಗಿರುತ್ತವೆ. ಇವುಗಳಿಂದ ತನ್ನನ್ನು ಬಳಸಿಕೊಳ್ಳಲು ಆಧುನಿಕ ವ್ಯವಹಾರಕ್ಕೆ ಕೈಹಾಕುತ್ತಾನೆ. ಆಲನಹಳ್ಳಿ ಅವರ ಕೃತಿಗಳಲ್ಲಿನ ಸಮಾಜ ಸ್ಥಿತ್ಯಂತರಗೊಳ್ಳುತ್ತಿರುವುದರಿಂದ ಬದಲಾವಣೆ ನಿಧಾನವಾಗಿರುತ್ತದೆ.

ನಾಗತಿಹಳ್ಳಿ ಚಂದ್ರಶೇಖರ್ ಅವರು 'ಗಂಡುಹೆಣ್ಣಿನ ಸಂಬಂಧ ಮತ್ತು ಸಂಕ್ರಮಣ ಸ್ಥಿತಿ' ಎನ್ನುವ ಲೇಖನದಲ್ಲಿ ಸಂಕ್ರಮಣ ಸ್ಥಿತಿಯನ್ನು ಹೇಳುತ್ತ ನವೋದಯದಿಂದ ನವ್ಯ ಹೇಗೆ ಭಿನ್ನವಾಗಿದೆ ಎಂದು ಹೇಳುತ್ತಾರೆ. ಗಂಡುಹೆಣ್ಣಿನ ಸಂಬಂಧದ ಬಗ್ಗೆ ಹೇಳುವಾಗ ಇವರ ಕಾವ್ಯ, ಕತೆ ಮತ್ತು ಕಾದಂಬರಿಗಳನ್ನು ಇಟ್ಟುಕೊಂಡೇ ನೋಡುತ್ತಾರೆ. ಇವರ ಕಾವ್ಯಗಳಲ್ಲಿ ರತಿ ಸುಖಕ್ಕಾಗಿ ಹಾತೊರೆಯುವ ಚಿತ್ರಗಳನ್ನೇ ನೀಡುತ್ತಾರೆ. ಎಲ್ಲಾ ಕಾವ್ಯಗಳಲ್ಲೂ ಸ್ತ್ರೀ ಒಂದು ಕಾಮದ ಸಂಕೇತವಾಗಿಯೇ ನಿಲ್ಲುವುದನ್ನು ಗುರ್ತಿಸುತ್ತಾರೆ. ನಾಗತಿಹಳ್ಳಿ ಅವರು ಕಾಮವನ್ನು ಒಂದು ಉನ್ನತವಾದ ಭಾರತೀಯ ನೆಲೆಯಲ್ಲಿ ಗ್ರಹಿಸಿದ್ದರಿಂದಲೇ ವಾತ್ಸಾಯನನನ್ನು ಇಲ್ಲಿ ನೆನೆಯುತ್ತಾರೆ. ಆದರೆ ಇವರ ಕತೆ ಕಾದಂಬರಿಗಳಲ್ಲಿ ಪಾಶ್ಚಾತ್ಯ ಅಭಿವ್ಯಕ್ತಿಯ ನೆಲೆ ಇರುವುದರಿಂದ ಇಲ್ಲಿ ಕೇವಲ ಕಾಮ, ತೃಷೆ, ಬೆತ್ತಲೆ ಮುಂತಾದವುಗಳೇ ಕಾಣುತ್ತವೆ ಎಂದಿದ್ದಾರೆ.

ಗಂಡು ಹೆಣ್ಣಿನ ಸಂಬಂಧಗಳಲ್ಲಿ ಆಲನಹಳ್ಳಿಯವರದು ಏಕಪಕ್ಷೀಯವಾದ, ಪುರುಷ ಅಹಮಿಕೆಯಿಂದ ಕೂಡಿದ ಪೂರ್ವಾಕ್ರಮಿತ ಧೋರಣೆ ಹೆಣ್ಣು ಒಂದು ವಸ್ತುವಾಗಿ ಬರುತ್ತಾಳೆ. ತನ್ನ ತೊಡೆ, ಸೊಂಟ, ಮೊಲೆಗಳನ್ನು, ವರ್ಣಿಸಿಕೊಳ್ಳಲಿಕ್ಕಾಗಿ ಬರುತ್ತಾಳೆ. ಬರುವ ಸ್ತ್ರೀಪಾತ್ರಗಳೆಲ್ಲ ಬಹುತೇಕ ಕಾಮಾತುರರಾಗಿರುತ್ತಾರೆ. ನಗ್ನರಾಗಲು ಹಾತೊರೆಯುತ್ತಾರೆ. ನಾಯಕರೆದುರು ದುರ್ಬಲರೂ, ಆತ್ಮವಿಶ್ವಾಸ ಕಳೆದುಕೊಂಡ ಹೆಣ್ಣುಗಳೂ ಆಗಿರುತ್ತಾರೆ. ರತಿಸುಖವನ್ನು ಉತ್ಕಟವಾಗಿ ಕೊಡಬಲ್ಲ ವಿಲಾಸಿನಿರಾಗಿರುತ್ತಾರೆ. ಇದಕ್ಕೆ ಅಪವಾದ ಪಾತ್ರಗಳು ಇಲ್ಲವೇ ಇಲ್ಲವೆನ್ನುವಷ್ಟು ಅಪರೂಪ.[೬]

ಕಾಮ ಮತ್ತು ತೃಷೆಯ ರತಿಸುಖಕ್ಕೆ ಗಂಡು ಮತ್ತು ಹೆಣ್ಣು ಎರಡೂ ಅತೀ ಅವಶ್ಯಕವಾದರೂ ಆಲನಹಳ್ಳಿ ಅವರು ಕೇವಲ ಹೆಣ್ಣನ್ನು ಮಾತ್ರ ಅವಳ ಅಂಗಾಂಗಳನ್ನು ಮಾತ್ರ ಹೇಳುತ್ತಾ ಏಕಪಕ್ಷೀಯವಾದ ರೀತಿಯಲ್ಲಿ ಬರೆದಿರುವುದನ್ನು ಈ ವಿಮರ್ಶಕರು ಗುರ್ತಿಸಿದ್ದಾರೆ. ಇವರ ಯಾವ ಕತೆ-ಕಾದಂಬರಿಯಲ್ಲಿ ಹೆಣ್ಣನ್ನು ಮತ್ತು ಗಂಡನ್ನು ಒಂದಾಗಿ ಬಾಳುವ ಸಂತೋಷವನ್ನು ಎಲ್ಲಿಯೂ ಚಿತ್ರಿಸುವುದಿಲ್ಲವೆಂಬ ಆರೋಪವೂ ಇದೆ.

ಗೀಜಗದ ಗೂಡು, ಫೀನಿಕ್ಸ್, ಅಂಟಿದ ನಂಟಿನ ಕೊನೆ ಬಲ್ಲವರಾರು, ಇನ್ನೊಂದು ಪ್ರಣಯ ಪ್ರಸಂಗ ಮುಂತಾದ ಕತೆಗಳಲ್ಲಂತೂ ಜಾತಿ ಮತ್ತು ವಯಸ್ಸು ಮುಂತಾದವುಗಳನ್ನು ಮೀರಿದ ಕಾಮವಿದೆ. ಹೆಣ್ಣಿಗೆ ಮಾತ್ರ ಲೈಂಗಿಕತೆಯ ತೀವ್ರತೆಯನ್ನು ಹೇಳುತ್ತಾರೆ. ಆದರೆ ಗಂಡಿಗೆ ರತಿಸುಖದ ಪರಮ ಸ್ವಾತಂತ್ರ್ಯವನ್ನು ನೀಡಿದ್ದಾರೆ. ವಿವಾಹವಾದ ಮೇಲೂ ಇಲ್ಲಿನ ಸ್ತ್ರೀಯರ ಗಂಡಂದಿರನ್ನು ಉದಾರಿಗಳಾಗಿಸತ್ತಾರೆ ಎಂದೂ ಸಹ ಹೇಳುತ್ತಾರೆ. ಸಂಕ್ರಮಣ ಸಮಾಜದ ಜಮೀನ್ದಾರ ಅಥವಾ ಊಳಿಗಮಾನ್ಯ ವ್ಯವಸ್ಥೆಯನ್ನು ಹೇಳುವಾಗ ನೈಜವಾಗಿ ಹೇಳುವ ದೃಷ್ಟಿಯಿಂದ ಅಲ್ಲಿನ ಸಮಾಜದ ಯಥಾವತ್ತಾದ ಚಿತ್ರಣವನ್ನು ಹೇಳಿದ್ದಾರೆ ಎಂಬುದನ್ನು ನಾವು ಗ್ರಹಿಸಬಹುದು. ಇದರಿಂದ ಆಲನಹಳ್ಳಿ ಅವರ ಸಾಮಾಜಿಕ ಗ್ರಹಿಕೆ ಅರ್ಥವಾಗುತ್ತದೆ.

ಭುಜಂಗಯ್ಯನ ದಶಾವತಾರಗಳಲ್ಲಿ ಸ್ತ್ರೀ ತೀರಾ ಗೌಣಳಾಗಿಯೇ ಉಳಿಯುತ್ತಾಳೆ. 'ಪರಸಂಗದ ಗೆಂಡೆತಿಮ್ಮ'ದಲ್ಲಿ ಮರಂಕಿ ಅತಿ ಕಾಮಿಯಾಗಿಯೇ ಗಂಡನೊಂದಿಗೆ ಸಾರ್ಥಕ ಸುಖ ಪಡೆಯದೆ ಅನೈತಿಕತೆಯಲ್ಲಿ ದುರಂತವನ್ನು ಕಾಣುತ್ತಾಳೆ. ಇಲ್ಲಿ ಇವಳೊಂದು ಭೋಗದ ವಸ್ತುವೇ ಆಗಿದ್ದಾಳೆ ಎನ್ನುತ್ತಾರೆ.

'ಸಂಸ್ಕೃತಿಯ ಸ್ಥಿತ್ಯಂತರ, ಊಳಿಗಮಾನ್ಯ ಸಂಸ್ಕೃತಿ ಮತ್ತು ಸಂಘರ್ಷ' ಎಂಬ ವಿಮರ್ಶಾ ಲೇಖದಲ್ಲಿ ಚಂದ್ರಶೇಖರ ಆಲೂರು ಅವರು ಆಲನಹಳ್ಳಿ ಅವರ ಕಥೆ ಕಾದಂಬರಿಗಳಲ್ಲಿ ನಡೆಯುವ ಸ್ಥಿತ್ಯಂತರ ಮತ್ತು ಸಂಘರ್ಷವನ್ನು ಗುರ್ತಿಸುತ್ತಾರೆ. ನಮ್ಮ ಸಂಸ್ಕೃತಿಯ ಮೇಲೆ ವಸಾಹತುಶಾಹಿ ಸಂಸ್ಕೃತಿಯ ಪ್ರಭಾವದಿಂದ ಉಂಟಾದ ಗೊಂದಲಗಳು ಸಂಘರ್ಷಗಳನ್ನು ಇವರು ಎರಡು ರೀತಿಯಲ್ಲಿ ಗುರ್ತಿಸುವ ಪ್ರಯತ್ನ ಮಾಡಿದ್ದಾರೆ. ಭಾರತ ಹಳ್ಳಿಗಳ ದೇಶವಾದ್ದರಿಂದ ವಸಾಹತುಶಾಹಿ ಅಥವಾ ಆಧುನಿಕತೆಯಿಂದ ಈ ಹಳ್ಳಿಗಳ ಮೇಲೆ ಆದ

ಪರಿಣಾಮವನ್ನು ಮತ್ತು ಎರಡನೆಯದಾಗಿ ಸಾಂಪ್ರದಾಯಿಕವಾಗಿ ಸಾಗಿಸಿಕೊಂಡು ಬಂದಿರುವ ಅವಿಭಕ್ತ ಕುಟುಂಬ ಸಂಸ್ಕೃತಿಯ ಮೇಲೆ ಉಂಟಾದ ಪರಿಣಾಮವನ್ನು ಕಾದಂಬರಿಯನ್ನು ವಿಶ್ಲೇಷಿಸುತ್ತಾ ಗುರ್ತಿಸುತ್ತಾರೆ. ಇವರ ಪ್ರಕಾರ ಆಲನಹಳ್ಳಿ ಅವರು ಆಧುನಿಕತೆಯನ್ನು ವಾಸ್ತವದ ನೆಲೆಯಲ್ಲಿ ವಿವರಿಸುತ್ತಾರೆ ಎಂದು ಹೇಳುತ್ತಾರೆ.

'ಕಾಡು' ಕಾದಂಬರಿಯಲ್ಲಿ ಬರುವ ಹಳ್ಳಿಯಲ್ಲಿನ ಎಲ್ಲಾ ಸ್ಥಾಪಿತ ಮೌಲ್ಯಗಳು ಆಧುನಿಕತೆಯ ಪ್ರಭಾವದಿಂದಲೇ ಸೋಲನ್ನು ಅನುಭವಿಸುತ್ತವೆ. ಪೊಲೀಸ್ ಬರುವುದರೊಂದಿಗೆ ಪಂಚಾಯಿತಿ ನ್ಯಾಯವು ಕೊನೆಗೊಂಡು ಪೊಲೀಸ್, ಕೋರ್ಟು ಪ್ರಾಮುಖ್ಯತೆ ಪಡೆದುಕೊಳ್ಳುತ್ತವೆ. ಇವೆಲ್ಲವುಗಳೂ ಆಧುನಿಕತೆಯ ಪ್ರಭಾವದಿಂದಲೇ ಸಾಧ್ಯ ಎಂಬುದನ್ನು ಈ ಕಾದಂಬರಿ ಅರ್ಥೈಸುತ್ತದೆ. ಈ ನೆಲೆಯಲ್ಲಿಯೇ ಚಂದ್ರಶೇಖರ ಆಲೂರು ಅವರು ಕಾದಂಬರಿಯನ್ನು ವಿಶ್ಲೇಷಿಸುತ್ತಾ ವಿಮರ್ಶಿಸಿದ್ದಾರೆ.

ಗೆಂಡೆತಿಮ್ಮ ಕಾದಂಬರಿಯಲ್ಲಿಯೂ ಆಧುನಿಕತೆಯ ಪ್ರಭಾವದಿಂದಲೇ ಈ ಸಮಾಜದಲ್ಲಿನ ಅವಿಭಕ್ತ ಕುಟುಂಬವು ವಿಭಜನೆ ಆಗುತ್ತದೆ. ಹಾಗು ಇವುಗಳು ಒಂದು ಸ್ಥಿತ್ಯಂತರ ಕಾಲದಲ್ಲಿ ನಡೆಯುವ ಸಂಘರ್ಷ. ಅಣ್ಣ-ತಮ್ಮ, ತಾಯಿ-ಮಗ, ಗಂಡ-ಹೆಂಡತಿ ಮುಂತಾದ ಸಂಬಂಧಗಳು ಈ ಆಧುನಿಕತೆಯ ಪ್ರಭಾವದಿಂದ ಆಂತರಿಕವಾಗಿ ಸಂಘರ್ಷಕ್ಕೆ ಒಳಗಾಗುತ್ತವೆ ಎನ್ನುವುದನ್ನು ಈ ಲೇಖನದಲ್ಲಿ ಹೇಳಲಾಗಿದೆ. 'ಕಾಡ'ನ್ನು ಫ್ಯೂಡಲ್ ಸಂಸ್ಕೃತಿಯ ನೆಲೆಯಿಂದ, 'ಭುಜಂಗಯ್ಯನ ದಶಾವತಾರಗಳ'ನ್ನು ಸಮಾಜವಾದಿ ನೆಲೆಯಿಂದ ಈ ಲೇಖಕರನ್ನು ನೋಡಿದ್ದಾರೆ. ಊಳಿಗಮಾನ್ಯ ವ್ಯವಸ್ಥೆಯು ಸ್ತ್ರೀಯನ್ನು ಅಡಿಯಾಳನ್ನಾಗಿ ಮಾಡಿಕೊಂಡಿರುವ ಬಗ್ಗೆ ಆಲನಹಳ್ಳಿ ಅವರು ಯಾವುದೇ ಪ್ರತಿಭಟನೆಯನ್ನು ಸೂಚಿಸುವುದಿಲ್ಲ. ಇಲ್ಲಿ ಹೆಣ್ಣು ಗಂಡಿನ ಅಡಿಯಾಳಾಗಿ ಗಂಡಿಗಿಂತ ಕೆಳಸ್ತರದಲ್ಲಿ ಬದುಕನ್ನು ನಡೆಸುತ್ತಾಳೆ ಎಂದು ಇವರು ಅಭಿಪ್ರಾಯ ಪಟ್ಟಿದ್ದಾರೆ. ಆಲನಹಳ್ಳಿ ಅವರು ಆಧುನಿಕತೆಯನ್ನು ವೈಭವದಿಂದ ಚಿತ್ರಿಸುವಾಗ ಸ್ತ್ರೀಯರನ್ನು ಕಡೆಗಣಿಸಿದ್ದಾರೆಯೂ ಹೌದು. ಇಲ್ಲಿನ ಯಾವ ಸ್ತ್ರೀಯೂ ತನ್ನ ಸಹಜವಾದ ಸ್ತ್ರೀತ್ವದಲ್ಲಿ ಕಾಣುವುದಿಲ್ಲ. ಇವರ ಕಥೆಗಳಲ್ಲಂತೂ ಸ್ತ್ರೀ ಕೇವಲ ಕಾಮದ ವಸ್ತುವೇ ಆಗಿದ್ದಾಳೆ ಎಂದು ಹೇಳುವುದು ಸೂಕ್ತವಾದ ಅರ್ಥಗ್ರಹಿಕೆಯಾಗಿದೆ. ಇಲ್ಲಿನ ಸ್ತ್ರೀಪಾತ್ರಗಳಿಗೆ ನ್ಯಾಯ ದೊರಕಿಸಿಕೊಡುವುದರಲ್ಲಿ ಆಲನಹಳ್ಳಿ ಸೋತಿದ್ದಾರೆ.

ಸಾಮಾಜಿಕ ನೆಲೆಯಿಂದ ಈ ಕಾದಂಬರಿಗಳನ್ನು ನೋಡುವುದಾದರೆ ಈ ಎಲ್ಲವುಗಳಲ್ಲಿ ಕೌಟುಂಬಿಕ ಬಿಕ್ಕಟ್ಟು, ವಿಘಟನೆ, ಸಂಘರ್ಷಗಳೂ ಇವೆ. ಆಧುನಿಕತೆಯನ್ನು ಒಪ್ಪಿಕೊಳ್ಳುವ ಲೇಖಕರು ಕಾದಂಬರಿಗಳನ್ನು ದುರಂತಕ್ಕೆ ಎಳೆದಿದ್ದಾರೆ. ಆದರೆ ಈ ಲೇಖನದಲ್ಲಿ ಆಧುನಿಕತೆಯಿಂದಾದ ಕೆಲವು ಬದಲಾವಣೆಗಳನ್ನು ಇಲ್ಲಿ ಹೇಳುತ್ತಾರೆ. ಮರಂಕಿ ದುರಂತಕ್ಕೆ ಕೊನೆಯದಾರೂ ಕಾದಂಬರಿಯ ಕೊನೆಯಲ್ಲಿ ಪ್ರತಿಯೊಂದು ಮನೆಯಲ್ಲಿ ಹಲವಾರು ಜನ ಮರಂಕಿಯರು ಕಾಣಿಸಿಕೊಳ್ಳುತ್ತಾರೆ. ಭುಜಂಗಯ್ಯನ ಟ್ರೇಡ್ ಕಲ್ಚರ್ ಇವನ ದುರಂತದ ನಂತರ ಹಲವು ಹಳ್ಳಿಯ ಜನರೂ ತಮಗೆ ಎದುರಾದ ಸವಾಲಿಗೆ ಸ್ಪಂದಿಸಿ ಬದಲಾಗುತ್ತಾ ಹೊಸತನವನ್ನು ಸ್ವಾಗತಿಸಿದ್ದಾರೆ ಎನ್ನುವ ಹಲವಾರು ಅಂಶಗಳನ್ನು ಈ ಚಿಕ್ಕ ಲೇಖನದಲ್ಲಿ ಹೇಳಿದ್ದಾರೆ.

'ಸಂಸ್ಕೃತಿಯ ವಿವರಗಳು ಮತ್ತು ಸಾಮಾಜಿಕ ನೆಲೆ' ಎನ್ನುವ ಲೇಖನದಲ್ಲಿ ಲಿಂಗದೇವರು ಹಳೆಮನೆ ಅವರು ಆಲನಹಳ್ಳಿ ಅವರ ಸಾಹಿತ್ಯದಲ್ಲಿ ಸಂಸ್ಕೃತಿಯ ಸ್ಥಿತ್ಯಂತರ ಮತ್ತು ಸಾಮಾಜಿಕ ನೆಲೆಯಲ್ಲಿ ನಿಂತು ನೋಡುತ್ತಾರೆ. ಇವರು ಮೊದಲಿಗೇ ಆಲನಹಳ್ಳಿ ಅವರೂ ಸೋಷಿಯಲಿಸ್ಟ್ ಸಿದ್ಧಾಂತದ ಚಳವಳಿಯಲ್ಲಿ ಭಾಗವಹಿಸಿದ್ದರು ಎಂಬುದನ್ನು ಹೇಳುತ್ತಲೇ ಅವರ ಸಾಹಿತ್ಯದ ಸಾಮಾಜಿಕ ವ್ಯವಸ್ಥೆಯನ್ನು ಮತ್ತು ಸಂಸ್ಕೃತಿಯನ್ನು ನೋಡುತ್ತಾರೆ.

ಆಲನಹಳ್ಳಿ ಅವರ ಕಾದಂಬರಿಗಳೆಲ್ಲವೂ ಸ್ಥಿತ್ಯಂತರ ಕಾಲದಲ್ಲಾದ್ದರಿಂದ ಇವರು ನಗರ ಮತ್ತು ಗ್ರಾಮೀಣ ಎರಡನ್ನೂ ನಡೆಸಿಕೊಂಡು ಹೋಗುವ ಅನಿವಾರ್ಯತೆಯನ್ನು ಈ ಲೇಖನದಲ್ಲಿ ಹೇಳಲಾಗಿದೆ. ಇವರು ಗುರ್ತಿಸುವ

ಹಾಗೆ ಸಂಕ್ರಮಣ ಕಾಲದಲ್ಲಿ ಮೌಲ್ಯಗಳ ತಿರಸ್ಕಾರ, ಬದಲಾವಣೆ, ಪರಿವರ್ತನೆಗಳು ಮತ್ತು ಹೊಸ ನಾಗರೀಕ ಬದುಕನ್ನು ಹೊಂದಬೇಕೆನ್ನುವ ಅನನ್ಯತೆ ಇವರ ಸಾಹಿತ್ಯದ ಸಾಮಾಜಿಕ ಮತ್ತು ಸಾಂಸ್ಕೃತಿಕ ವಿವರಗಳಲ್ಲಿ ಕಾಣುತ್ತೇವೆ.

ಇವರ ಸಾಮಾಜಿಕ ವ್ಯವಸ್ಥೇ ಗ್ರಾಮೀಣ, ಫ್ಯೂಡಲ್ ವ್ಯವಸ್ಥೆ, ಜಾತಿ ಮತ್ತು ವರ್ಗಗಳ ಶ್ರೇಣೀಕರಣ ಇವುಗಳನ್ನು ಎಲ್ಲಾ ಮೂರು ಕಾದಂಬರಿಗಳಲ್ಲೂ ನೋಡಬಹುದು. ಅದನ್ನು ಈ ಲೇಖನದಲ್ಲಿ ವಿವರವಾಗಿ ಹೇಳಿದ್ದಾರೆ. ಈ ಕಾದಂಬರಿಗಳಲ್ಲಿ ದುರಂತವೇ ಕೊನೆಗೆ ಸಂಭವಿಸುವುದರಿಂದ ಈ ಸಾಮಾಜಿಕ ವ್ಯವಸ್ಥೆಯನ್ನು ಅರ್ಥ ಮಾಡಿಕೊಳ್ಳುವುದು ಸ್ವಲ್ಪ ಕಠಿಣವೇ. ಆ ಲೇಖಕರ ಕಾದಂಬರಿಗಳ ಸಂಕೀರ್ಣತೆಯಲ್ಲಿ ಸಾಮಾಜಿಕ ಕಲೆ ಮತ್ತು ವೈಯಕ್ತಿಕ ನೆಲೆ ಎಂದು ಗುರ್ತಿಸಿದ್ದು, ಸ್ಥಿತ್ಯಂತರ ಎನ್ನುವಂತಹದ್ದು ಒಂದು ಸಮಾಜದಲ್ಲಿ ನಡೆದದ್ದಾರೇ, ಕಾಮ, ಅನೈತಿಕತೆ ಎನ್ನುವುದು ವೈಯಕ್ತಿಕ ನೆಲೆಯಲ್ಲಿ ನಡೆಯುತ್ತದೆ. ಶ್ರೇಣೀಕರಣ ಮತ್ತು ಇಲ್ಲಿನ ಪಾತ್ರಗಳು ಸಾಮಾಜಿಕ ಕಟ್ಟಳೆಗಳ ಒಳಗೇ ಕೆಲಸ ಮಾಡುವುದಾದ್ದರಿಂದ ದುರಂತ ಸಂಭವಿಸಿದೆ. ಬದಲಾವಣೆಯ ಹಂತದಲ್ಲಿರುವ ಒಂದು ಜನಾಂಗದ ಸಾಂಸ್ಕೃತಿಕ ವಿವರಗಳನ್ನು ಕಟ್ಟಿಕೊಡುವ ಪ್ರಯತ್ನ ಬೇರೆ ರೀತಿಯದೇ ಆಗಿದೆ ಎಂದು ಹೇಳುತ್ತಾರೆ. ಏಕೆಂದರೆ ಶ್ರೀಕೃಷ್ಣ ಅವರು ಅರ್ಥೈಸಿಕೊಂಡಿರುವ ಸಂಸ್ಕೃತಿ ಯಾವುದು ಎಂದು ಪ್ರಶ್ನೆ ಮಾಡುವುದರ ಜೊತೆಗೆ ಇವುಗಳ ವಿವರಗಳನ್ನು ಪಡೆಯಲು ಹೋದರೆ ನಿರಾಸೆ ಉಂಟಾಗುತ್ತದೆ ಎಂದು ಹೇಳುತ್ತಾರೆ. ಕಾಡು ಕಾದಂಬರಿಯನ್ನು ಕುರಿತು ಊಳಿಗಮಾನ್ಯಶಾಹಿ ವ್ಯವಸ್ಥೆಯ ಅತಿರೇಕಗಳಿಂದ "ಗ್ರಾಮವೊಂದು ತನ್ನ ಸಾಮಾಜಿಕ, ಸಾಂಸ್ಕೃತಿಕ ನೆಲೆಗಳನ್ನು ಕಳೆದುಕೊಳ್ಳುತ್ತಾ ಹೋಗಿ ಕಾಡು ತನ್ನ ನೈಸರ್ಗಿಕ ನೆಲೆಯನ್ನು ಎಲ್ಲೆಡೆ ಹರಡುವುದನ್ನು, ಇದರ ಸಾಮಾಜಿಕ ನೆಲೆ ಮುಖ್ಯವಾಗಿ ಅರಣ್ಯ ವ್ಯವಸ್ಥೆಯ ಹಿನ್ನೆಲೆಯಿಂದಲೇ ಗೃಹೀತವಾದದ್ದು"[೮] ಎನ್ನುತ್ತಾರೆ. ಒಟ್ಟಾರೆ ಈ ಕಾದಂಬರಿಯ ಸಾಂಸ್ಕೃತಿಕ ವಿವರಗಳು ಊಳಿಗಮಾನ್ಯ ಸಂಸ್ಕೃತಿಯ ನೆಲೆಯಿಂದ ಹಿಂಸೆ, ಕ್ರೌರ್ಯ, ಲೈಂಗಿಕತೆಯನ್ನು ವೈಭವೀಕರಿಸಿ ಅದರ ಮೂಲಕ ಒಂದು ಗ್ರಾಮದಲ್ಲಿನ ದುರಂತದ ವಿವರಗಳು ಊಳಿಗಮಾನ್ಯ ಸಂಸ್ಕೃತಿಯ ನೆಲೆಯಾದ ಹಿಂಸೆ, ಕ್ರೌರ್ಯ, ಲೈಂಗಿಕತೆಯನ್ನು ವಭವೀಕರಿಸಿ ಅದರ ಮೂಲಕ ಒಂದು ಗ್ರಾಮದಲ್ಲಿನ ದುರಂತದ ವಿವರಗಳನ್ನು ಹೇಳುತ್ತದೆ.

ಪರಸಂಗದ ಗೆಂಡೆತಿಮ್ಮ ಕುರಿತು ಹೇಳುವಾಗ ಇಲ್ಲಿ ಬರುವ ಪ್ಯಾಷನಬಲ್ ಸಾಮಾಗ್ರಿಗಳೇ ಗೌವಳ್ಳಿಯ ಪರಿವರ್ತನೆಗೆ ಕಾರಣವಾಗುವ ಸಾಂಸ್ಕೃತಿಕ ವಿವರವಾಗಿದೆ. ಅಷ್ಟೇ ಪ್ಯಾಷನಬಲ್ ಆದ ಬದುಕನ್ನು ನಡೆಸುವ ಮರಂಕಿ-ಗೆಂಡೆತಿಮ್ಮರ ಸಾಮಾಜಿಕ ಬದುಕಿನ ವಿವರಗಳನ್ನು ಹೇಳುತ್ತಾ ಇವೆರಡರ ದುರಂತವನ್ನು ಈ ಲೇಖನದಲ್ಲಿ ಉಲ್ಲೇಖಿಸುತ್ತಾರೆ. ಗ್ರಾಮೀಣ ಸಂಸ್ಕೃತಿಯ ಒಲವು ನಗರೀಕರಣದ ಕಡೆಗೆ ವಾಲುವ ಸಂಕ್ರಮಣ ಕಾಲಘಟ್ಟದಲ್ಲಿನ ವಿವರಗಳು ಈ ಕಾದಂಬರಿಗಳಲ್ಲಿದೆ ಎನ್ನುವುದನ್ನು ಸೂಕ್ಷ್ಮವಾಗಿ ಹೇಳಿದ್ದಾರೆ.

ಭುಜಂಗಯ್ಯನ ದಶಾವತಾರಗಳು ಕಾದಂಬರಿಯೂ ಅದೇ ಸಾಮಾಜಿಕ ವ್ಯವಸ್ಥೇಯನ್ನೇ ಒಳಗೊಂಡಿದೆ. ಮತ್ತು ಟ್ರೇಡ್ ಕಲ್ಚರ್‌ಗಳೆರಡರ ಸಮನ್ವಯವನ್ನು ಹೇಳುತ್ತಾರೆ. ಅಷ್ಟೇ ಅಲ್ಲದೇ ಈ ಕಾಲದ ಪಾತ್ರಗಳ ಬೌದ್ಧಿಕ ಬದಲಾವಣೆಗಳೂ ತನ್ನೆಲ್ಲಾ ಸಾಮಾಜಿಕ ಮತ್ತು ಸಾಂಸ್ಕೃತಿಕ ನೆಲೆಗಳನ್ನೆಲ್ಲಾ ಮೀರಿ ಮಾನವೀಯತೆಯ ಕಡೆ ತಿರುಗುವುದನ್ನು ಹೇಳುವಾಗ ಈ ಕಾದಂಬರಿಗಳನ್ನು ಸಮಾಜವಾದದ ದೃಷ್ಟಿಕೋನದಲ್ಲಿಯೇ ನೋಡುತ್ತಾರೆ ಎಂಬುದು ಗೊತ್ತಾಗುತ್ತದೆ. ಈ ಕಾದಂಬರಿಯನ್ನು ಬರೆಯುವ ಕಾಲಕ್ಕಾಗಲೇ ಆಲನಹಳ್ಳಿ ಅವರು ಸಾಮಾಜಿಕ ಸಿದ್ಧಾಂತದಿಂದ ಪ್ರಭಾವಿತರಾಗಿದ್ದರು ಎಂಬುದನ್ನು ಮರೆಯುವಂತಿಲ್ಲ.

ಆಲನಹಳ್ಳಿ ಅವರ ಕಾದಂಬರಿಗಳನ್ನು ಕುರಿತು ಹೇಳುವಾಗ ಟಿ. ಪಿ. ಅಶೋಕ ತಮ್ಮ ಲೇಖನದಲ್ಲಿ ಸಾಮಾಜಿಕ ನೆಲೆಯಿಂದ ನೋಡಿದಾಗ ಈ ಕಾದಂಬರಿಗಳಲ್ಲಿ ಆಧುನಿಕತೆಯ ಪ್ರಭಾವ ಗ್ರಾಮೀಣ ಪ್ರದೇಶಕ್ಕೆ ಬಂದದ್ದನ್ನು

ಹೇಳುತ್ತಾ ಗೆಂಡೆತಿಮ್ಮ, ಭುಜಂಗಯ್ಯ ನಿಜವಾಗಿಯೂ ಕ್ರಾಂತಿಕಾರಿಗಳಂತೂ ಅಲ್ಲ. ಆದರೆ ಗ್ರಾಮೀಣ ಬದುಕೇ ಉಸಿರಾಗಿರುವ ಭಾರತದಲ್ಲಿ ಸಾಮಾಜಿಕ ಪಲ್ಲಟಗಳು ಸಾಧ್ಯವಾಗುವುದು ಶ್ರೀಕೃಷ್ಣ ಅವರ ಕಿಟ್ಟಿ, ರಾಜು ಇಂತಹವರು ಆಧುನಿಕ ವಿದ್ಯಾಭ್ಯಾಸವನ್ನು ಪಡೆದು ತಮ್ಮ ಸ್ಥಿತಿಯಿಂದ ಬದಲಾವಣೆಪಡೆದಾಗ ಮಾತ್ರ ಎಂದು ಹೇಳುತ್ತಾರೆ.

ಪಿ. ಲಂಕೇಶ್ ಅವರು ಆಲನಹಳ್ಳಿ ಅವರನ್ನು ಅತ್ಯಂತ ಹತ್ತಿರದಿಂದ ನೋಡಿದವರಾಗಿದ್ದಾರೆ. ಅವರೊಂದಿಗೆ ಚರ್ಚೆ, ವಿಮರ್ಶೆ, ಗೆಳೆತನ ಮುಂತಾದವುಗಳು ಇದ್ದದ್ದರಿಂದ ಅವರನ್ನು ಕೇವಲ ಒಬ್ಬ ಸಾಮಾನ್ಯ ಲೇಖಕನನ್ನಾಗಿ ಭಾವಿಸದೇ ಅವರ ಅಂತರಂಗದ ಕೆಲವು ವಿಚಾರಗಳನ್ನು ಓದುಗರಿಗೆ ಒದಗಿಸಿದ್ದಾರೆ. ಲಂಕೇಶ್ ಅವರು ತಮ್ಮ ವೈಯಕ್ತಿಕ ನೆಲೆಯಿಂದ ಈ ಲೇಖಕರನ್ನು ನೋಡಿದ್ದಾರೆ. ಅತ್ಯಂತ ಆತ್ಮೀಯವಾಗಿ ನಡೆದುಕೊಳ್ಳುವ, ಸೌಜನ್ಯ, ಪ್ರೀತಿಯ ಸ್ನೇಹ, ಹುಂಬತನ, ಹಾಸ್ಯ, ಮುಗ್ಧತೆ, ಜಗಳ, ಬಡತನವನ್ನು ಕಂಡು ಮರುಗುವುದು, ತನಗೆ ಕಷ್ಟಬಂದಾಗ ಸಿಕ್ಕಿ ನಲುಗುವುದು ಈ ಲೇಖಕರ ಸ್ವಭಾವವಾಗಿದೆ. ಅದಕ್ಕಾಗಿಯೇ ಇವರು ಆಲನಹಳ್ಳಿ ಜೀವನದ ಹಲವು ಘಟನೆಗಳನ್ನು, ಅನುಭವನಗಳನ್ನು ಇವರ ಟೀಕೆಟಿಪ್ಪಣಿಗಳಲ್ಲಿ ದಾಖಲಿಸಿದ್ದಾರೆ. ಕೃಷ್ಣನ ಕಣ್ಮರೆ ಎಂಬ ಲೇಖನದಲ್ಲಿ ಲಂಕೇಶರು ತಾನು ನೋಡಿದ, ಅರಿತುಕೊಂಡಿದ್ದ ಆಲನಹಳ್ಳಿ ಅವರ ಚಿತ್ರಣವಿದೆ. ಇವರ ಹಲವು ವರ್ತನೆಗಳು, ಅನುಭವಗಳು ಇವರ ಸಾಹಿತ್ಯದ ಕೆಲವು ಪಾತ್ರಗಳಲ್ಲಿ ಕಂಡುಬರುತ್ತಿವೆಯೇನೋ ಎನ್ನುವುದು ಸಹೃದಯ ಓದುಗರ ಅನುಭವಕ್ಕೆ ಬರುತ್ತದೆ. ಇವರ ಸಾಹಿತ್ಯದಲ್ಲಿ ಕಂಡುಬರುವ ಜಾತಿಪದ್ಧತಿ, ಶ್ರೇಣೀಕರಣ ಮುಂತಾದವುಗಳನ್ನು ಕೇಳುವ ಇವರು ಆಂತರಿಕವಾಗಿ ಅವುಗಳನ್ನು ಕಂಡರೆ ವಿರೋಧಿಸುವ ತೀವ್ರವಾದ ಅಭಿಲಾಷೆ ಹೊಂದಿದ್ದರು. ಅದಕ್ಕೆ ಶಿವಮೊಗ್ಗದ ಆರೆಸ್ಸೆಸ್ ಸಮ್ಮೇಳನವನ್ನು ಉದಾಹರಣೆಯನ್ನಾಗಿ ನೀಡುತ್ತಾರೆ.

ಶ್ರೀಕೃಷ್ಣರ ಆಸೆ, ನಿರಾಸೆ, ಆವಾಂತರ, ಸುಖ-ದುಃಖ, ಎಲ್ಲವನ್ನೂ ಬಲ್ಲವರಾಗಿದ್ದ ಲಂಕೇಶ ಒಬ್ಬ ಕವಿ, ಕಾದಂಬರಿಕಾರನನ್ನಾಗಿಯೂ ಮೆಚ್ಚಿಕೊಂಡಿದ್ದು ಉಂಟು. ಆಲನಹಳ್ಳಿ ಬಾಲ್ಯದಲ್ಲಿ ಅನುಭವಿಸಿದ ಅನುಭವಗಳೇ ಅದಕ್ಕೆ ಸಾಕ್ಷಿಯಾಗಿದೆ. ಕೆಲವು ಸತ್ಯಘಟನೆಗಳು ನಡೆದಿರುವುದನ್ನು ನೋಡುತ್ತೇವೆ. ಇವರ ಎಲ್ಲಾ ಕಾದಂಬರಿಗಳಲ್ಲೂ ಒಂದಲ್ಲಾ ಒಂದು ರೀತಿಯಲ್ಲಿ ತನ್ನ ಪ್ರತಿಭೆಯನ್ನು ಹೊರಹಾಕಿದ್ದಾರೆ ಎಂಬುದನ್ನು ಇವರು ಹೇಳುತ್ತಾರೆ. "ಅಲ್ರೀ ಲಕ್ಷಾಂತರ ಗೌಡರು ನೆಲ ಗೇದು ಗೇದು ಹೇಳ ಹೆಸರಿಲ್ಲದೆ ಹೋಗಿದ್ದಾರೆ. ಈ ಶಂಕರಲಿಂಗೇಗೌಡನೊಬ್ಬ ಪತ್ರಿಕೋದ್ಯಮ ಕಲಿತಿದ್ದಾನೆ. ಅವನನ್ನೂ ನೆಲ ಉಳೋದಕ್ಕೆ ಕಳಿಸ್ತಿದೀರಲ್ಲ? ಎಂದು ರೇಗಿದ. ಆದರೆ ಶಂಕರಲಿಂಗೇಗೌಡ ಜೊತೆಯವರ ಪೂಸಿ ಮಾತು ಕೇಳಿ ಹತ್ತು ವರ್ಷ ನೆಲದೊಂದಿಗೆ ಸೆಣಸಿ ಸುಸ್ತಾಗಿ ಸಾಲ ಕಟ್ಟಿಕೊಂಡು ಪಟ್ಟಣಕ್ಕೆ ಹಿಂದಿರುಗಿದರು."[೨] ಎಂಬುದು ಭುಜಂಗಯ್ಯನ ಪಾತ್ರ ಸೃಷ್ಟಿಯಲ್ಲಿ ಧ್ವನಿಸುವುದನ್ನು ಕಾಣಬಹುದು.

'ಕೃಷ್ಣ ಒಂದು ಸಂತಾಪ ಸಭೆ' ಲೇಖನದಲ್ಲಿ ಹಲವಾರು ಲೇಖಕರು ತಮ್ಮ ಅಭಿಪ್ರಾಯಗಳನ್ನು ಹೇಳಿಕೊಂಡಿದ್ದಾರೆ. ಅವರವರ ಗ್ರಹಿಕೆಗಳಲ್ಲಿ ಕೃಷ್ಣ ಮತ್ತೊಮ್ಮೆ ಮಾತನಾಡುತ್ತಾರೆ. ಕೆಲವರು ಅವರ ಮಿತಿಗಳ ಬಗ್ಗೆ ಹೇಳಿದರೆ ಮತ್ತೆ ಕೆಲವರು ಇನ್ನಷ್ಟು ಮುಂದುವರೆದು ಅವರನ್ನ ಪ್ರಸಿದ್ಧ ತತ್ವಜ್ಞಾನಿಗಳಿಗೆ ಹೋಲಿಸಿದ್ದಾರೆ. ಲಂಕೇಶ್ ಇವರನ್ನು ಒಬ್ಬ ಒಳ್ಳೆಯ ಬರಹಗಾರನಾಗಿ, ಮಾತುಗಾರನಾಗಿ, ಮುಗ್ಧನಾಗಿ ಕಂಡಿದ್ದು ವೈಯಕ್ತಿಕವಾಗಿ ಅವರಿಗಿದ್ದ ದೌರ್ಬಲ್ಯಗಳನ್ನು ತಮ್ಮ ಎರಡೂ ಲೇಖನದಲ್ಲಿ ಹೇಳಿದ್ದಾರೆ. ತನ್ನ ವೈಯಕ್ತಿಕ ಅಭಿಪ್ರಾಯಗಳನ್ನು ಹೇಳುವಾಗ ಯಾವುದೇ ಮುಚ್ಚುಮರೆ ಇಲ್ಲದೇ ಹೇಳಿದ್ದಾರೆ. ಏಕೆಂದರೆ ಒಬ್ಬ ಶ್ರೇಷ್ಠ ಲೇಖಕನ ಅನುಭವಗಳು ಅವನ ಕಾವ್ಯಗಳಲ್ಲಿ, ಅವನ ಕತೆ-ಕಾದಂಬರಿಗಳಲ್ಲಿ ಹೇಗೆ ಪ್ರಕಟವಾಗುತ್ತವೆ ಎಂಬುದನ್ನು ಇಂತಹ ವಿವರಗಳೊಂದಿಗೆ ಮಾತ್ರ ನೋಡಲು ಸಾಧ್ಯ.

ಶ್ರೀಕೃಷ್ಣ ಆಲನಹಳ್ಳಿ ಕುರಿತು ಈಗಾಗಲೇ ಸಾಕಷ್ಟು ವಿಮರ್ಶೆಗಳು ಮತ್ತು ಸಂಶೋಧನಾತ್ಮಕ ಅಧ್ಯಯನಗಳು ಪ್ರಕಟವಾಗಿವೆ. ಅವರ ಸಾಹಿತ್ಯವನ್ನು ವಿವಿಧ ಲೇಖಕರು ಬೇರೆ ಬೇರೆ ದೃಷ್ಟಿಕೋನಗಳಿಂದ

ವಿಮರ್ಶೆಗೊಳಪಡಿಸಿದ್ದಾರೆ. ಇವರನ್ನು ನವ್ಯದ ಸಮಕಾಲೀನರಾಗಿ ಗುರುತಿಸಿ ಅನಂತಮೂರ್ತಿ ಮೆಚ್ಚುಗೆ ಮಾತುಗಳನ್ನಾಡಿದ್ದಾರೆ. ಕೆ. ವಿ. ತಿರುಮಲೇಶ್ ಅವರು ಶ್ರೀಕೃಷ್ಣರ ಸಾಹಿತ್ಯವನ್ನು ನವ್ಯದ ವೈಚಾರಿಕತೆಯ ದೃಷ್ಟಿಯಲ್ಲಿ ಪ್ರತಿಕ್ರಿಯಿಸಿದ್ದಾರೆ. ಮತ್ತು ಕೆ. ವಿ. ನಾರಾಯಣ ಅವರು ಭುಜಂಗಯ್ಯನ ಪಾತ್ರ ಸೃಷ್ಟಿಯ ಮಹತ್ವವನ್ನು ಹೇಳಿದ್ದಾರೆ. ಅದೇ ಶ್ರೀಕೃಷ್ಣರನ್ನು ನಾಗತಿಹಳ್ಳಿ ಚಂದ್ರೇಶಖರ್ ಅವರು ಕಾಮುಕನನ್ನಾಗಿ ಮತ್ತು ಸ್ತ್ರೀ ಪಾತ್ರಗಳೆಲ್ಲವೂ ಭೋಗದ ವಸ್ತುಗಳನ್ನಾಗಿ ನೋಡಿರುವುದೂ ಉಂಟು. ಡಾ. ರಹಮತ್ ತರೀಕೆರೆ ಅವರು ಇವರ ಸಾಹಿತ್ಯದಲ್ಲಿ ವಸಾಹತುಶಾಹಿ ಆಧುನಿಕತೆಯೆನ್ನುವುದನ್ನು ಭೌದ್ಧಿಕ ಮತ್ತು ಭೌತಿಕ ಎಂದು ವಿಂಗಡಿಸಿ ಅರ್ಥಪೂರ್ಣವಾಗಿ ವಿಶ್ಲೇಷಿಸಿದ್ದಾರೆ. ಪ್ರಸ್ತುತ ಈ ನನ್ನ ನಿಬಂಧದಲ್ಲಿ ಮನುಷ್ಯ ಮತ್ತು ಅವನ ಸಮಾಜವು ಪರಿವರ್ತನೆಗೊಳ್ಳುವ ಹಂತದಲ್ಲಿ ಸ್ಥಿತ್ಯಂತರ ಸಮಾಜದಲ್ಲಿ ನಡೆಯುವ ಸಂಘರ್ಷಗಳನ್ನು ಮತ್ತು ಅವುಗಳ ಸ್ವರೂಪಗಳನ್ನು ಸಂಪ್ರದಾಯ ಮತ್ತು ಆಧುನಿಕತೆಗಳ ನಡುವಿನ ಸಂಘರ್ಷಗಳು, ಕೌಟುಂಬಿಕ ಸಂಘರ್ಷಗಳು, ಸಾಮಾಜಿಕ ಸಂಘರ್ಷಗಳು, ಮನುಷ್ಯ ಸಂಬಂಧದ ನಡುವಿನ ಸಂಘರ್ಷಗಳು, ಮತ್ತು ಲೈಂಗಿಕ ಸಂಬಂಧಗಳ ನಡುವಿನ ಸಂಘರ್ಷಗಳನ್ನಾಗಿ ಗುರುತಿಸಿದ್ದು ಅವುಗಳನ್ನು ಆಯಾ ಅಧ್ಯಾಯಗಳಲ್ಲಿ ವಿವರವಾಗಿ ಚರ್ಚಿಸಿದ್ದೇನೆ.

## ಅಡಿ ಟಿಪ್ಪಣಿಗಳು

೧. ಗೋಪಾಲಕೃಷ್ಣ ಅಡಿಗ, ಸಾಕ್ಷಿ ಸಂಚಿಕೆ ಪು. ೫೩

೨. ಗೋಪಾಲಕೃಷ್ಣ ಅಡಿಗ, ಸಾಕ್ಷಿ ಸಂಚಿಕೆ ಪು. ೫೪

೩. ಅಮರೇಶ ನುಗಡೋಣಿ, ಶ್ರೀಕೃಷ್ಣ ಆಲನಹಳ್ಳಿ, ಪು. ೩೩

೪. ಶ್ರೀಕೃಷ್ಣ ಆಲನಹಳ್ಳಿ, ಪರಸಂಗದ ಗೆಂಡೆ ತಿಮ್ಮ, ಪು. ೨೦೩

೫. ಕೆ. ವಿ. ನಾರಾಯಣ, ಬೇರು ಕಾಂಡ ಚಿಗುರು, ಪು. ೩೫೫

೬. ಕೆ. ವಿ. ನಾರಾಯಣ, ಬೇರು ಕಾಂಡ ಚಿಗುರು, ಪು. ೩೫೪

೭. ವಿವಿಧ ಲೇಖಕರು, ಸಂಸ್ಕೃತಿ ಸ್ಥಿತ್ಯಂತರ ಮತ್ತು
ಶ್ರೀಕೃಷ್ಣ ಆಲನಹಳ್ಳಿಯವರ ಸಾಹಿತ್ಯ, ಪು. ೧೩

೮. ವಿವಿಧ ಲೇಖಕರು, ಸಂಸ್ಕೃತಿ ಸ್ಥಿತ್ಯಂತರ ಮತ್ತು
ಶ್ರೀಕೃಷ್ಣ ಆಲನಹಳ್ಳಿಯವರ ಸಾಹಿತ್ಯ, ಪು. ೨೧

ಅಧ್ಯಾಯ ಮೂರು

# ಸಂಪ್ರದಾಯ ಮತ್ತು ಆಧುನಿಕತೆಗಳ ನಡುವಿನ ಸಂಘರ್ಷಗಳು

ಭಾರತಕ್ಕೆ ಬ್ರಿಟಿಷರು ಬಂದು ವಸಾಹತುವನ್ನು ಪ್ರಾರಂಭಿಸಿದ ಮೇಲೆ ಇಲ್ಲಿ ತಮ್ಮ ಪ್ರಭುತ್ವನ್ನು ಸ್ಥಾಪಿಸಿದರು. ಇದರಿಂದ ಇಡೀ ಭಾರತದಲ್ಲಿ ಜನಾಂದೋಲನ ಪ್ರಾರಂಭವಾಯಿತು. ಬ್ರಿಟಿಷರು ತಮ್ಮ ಆಡಳಿತವನ್ನು ಪ್ರಾರಂಭಿಸಿದ ಮೇಲೆ ಸಮಾಜದ ಪ್ರಗತಿಗಾಗಿ ರಸ್ತೆ, ಆಸ್ಪತ್ರೆ, ಶಾಲೆಗಳು, ಪೋಸ್ಟಾಫೀಸು, ಪೊಲೀಸ್, ಕೋರ್ಟು, ಬಸ್‌ನಿಲ್ದಾಣಗಳು, ಹೋಟೆಲ್ಲುಗಳು ಮುಂತಾದವುಗಳು ಪ್ರಾರಂಭವಾದವು. ಈ ಸೌಲಭ್ಯಗಳು ಎಲ್ಲಾ ಜನರಿಗೂ ಸಮಾನವಾಗಿ ದೊರೆಯಬೇಕೆಂಬುದು ಇವರ ಅಭಿಪ್ರಾಯ. ಆದರೆ ಈ ವ್ಯವಸ್ಥೆಯನ್ನು ಮೊದಲನೇ ವರ್ಗದಲ್ಲಿದ್ದ ಬ್ರಾಹ್ಮಣರು ವಿರೋಧಿಸಿದರು. ಏಕೆಂದರೆ ದಲಿತರು, ಶೂದ್ರರು ಎಲ್ಲರಿಗೂ ಸಮಾನವ ಅವಕಾಶಗಳು ಸಿಗುತ್ತವೆ ಹಾಗೂ ತಮ್ಮ ಸಂಪ್ರದಾಯಕ್ಕೆ ಧಕ್ಕೆ ಬರುತ್ತದೆ ಎಂಬ ಕಾರಣಕ್ಕಾಗಿ. ಆದರೂ ಈ ಮೊದಲನೆಯ ವರ್ಗವು ಶಿಕ್ಷಣವನ್ನು ಪಡೆದು ಸರ್ಕಾರದಲ್ಲಿ ಉದ್ಯೋಗ ಮತ್ತು ಸೌಲತ್ತುಗಳನ್ನು ಪಡೆಯುತ್ತಿತ್ತು. ಬ್ರಿಟಿಷರು ಆಡಳಿತವನ್ನು ಚುರುಕುಗೊಳಿಸಿದಾಗ ಹಲವಾರು ಸುಧಾರಣೆಗಳನ್ನು ತಂದರು. ಅವುಗಳೆಂದರೆ ಸತಿ ಸಹಗಮನ ಪದ್ಧತಿ, ಬಾಲ್ಯವಿವಾಹ ಪದ್ಧತಿಗಳನ್ನು ನಿಷೇಧಿಸಿದ್ದು, ವಿಧವಾ ವಿವಾಹ, ಶಿಕ್ಷಣ ಪದ್ಧತಿ, ಮೂಢನಂಬಿಕೆ ವಿರೋಧಿಸುವುದು ಮುಂತಾದವುಗಳಲ್ಲಿ ಸುಧಾರಣೆಯನ್ನು ತಂದರು. ಇವುಗಳನ್ನು ಸಂಪ್ರದಾಯಸ್ಥ ಬ್ರಾಹ್ಮಣರು ಅಥವಾ ಮೇಲ್ವರ್ಗದ ಜನರು ವಿರೋಧಿಸುತ್ತಲೇ ಬಂದರು. ಈ ಸುಧಾರಣೆಗಳೆಲ್ಲವೂ ಕೆಳವರ್ಗದ ದಲಿತ ಮತ್ತು ಶೂದ್ರ ವರ್ಗಗಳಿಗೆ ಅನುಕೂಲಕರವಾದ ವಾತಾವರಣವನ್ನು ನಿರ್ಮಿಸಿದವು. ಈ ರೀತಿಯ ಬ್ರಿಟಿಷ ಆಡಳಿತವು ಒಂದು ವರ್ಗಕ್ಕೆ ಬಿಡುಗಡೆಯನ್ನು ತೋರಿಸಿದರೆ ಅದು ಇನ್ನೊಂದು ವರ್ಗಕ್ಕೆ ಬಿಕ್ಕಟ್ಟಾಗಿ ಪರಿಣಮಿಸಿತು. ಆಧುನಿಕ ಸುಧಾರಣೆಗಳಿಂದ ಒಂದು ವರ್ಗವು ದೂರ ಸರಿಯುತ್ತಿದ್ದರೆ ಮತ್ತೊಂದು ವರ್ಗವು ಅದಕ್ಕೆ ಹತ್ತಿರವಾಗುತ್ತದೆ. ಈ ಬ್ರಿಟಿಷ್ ಆಡಳಿತ ವ್ಯವಸ್ಥೆಯು ಎಂದಿಗೂ ಏಕ ಮುಖವಾಗಿರಲಿಲ್ಲ. ಇದು ಸ್ಥಿತ್ಯಂತರ ಸಮಾಜದ ಸಂಪ್ರದಾಯ ಮತ್ತು ಆಧುನಿಕತೆಗಳ ನಡುವಿನ ಸಂಘರ್ಷವನ್ನು ಸೂಚಿಸುತ್ತವೆ. ಹಾಗೂ ಸುಧಾರಣಾವಾದಿ ನಿಲುವನ್ನು ಹೊಂದಿರುವ ಕಾದಂಬರಿಗಳಾದ ಇಂದಿರಾ, ಇಂದಿರಾಬಾಯಿ ಮುಂತಾದ ಕೃತಿಗಳು ಹುಟ್ಟಿಕೊಂಡವು. ಸ್ವಾತಂತ್ರ್ಯಾನಂತರ ಕಾಲಘಟದಲ್ಲಿ ಶ್ರೀಕೃಷ್ಣ ಆಲನಹಳ್ಳಿ ಅವರ ಕಥನ ಕೂಡ ಸಂಪ್ರದಾಯ ಮತ್ತು ಆಧುನಿಕತೆಗಳ ನಡುವಿನ ಸಂಘರ್ಷದ ಕೇಂದ್ರವಾಗಿರುವುದನ್ನು ಗುರುತಿಸಬಹುದು. ಇದಕ್ಕೆ ಪೂರಕವಾಗಿ ನವ್ಯದ ಸಾಹಿತ್ಯಿಕ ಧೋರಣೆಗಳೂ ಕೂಡ ಇದಕ್ಕೆ ಪ್ರೇರಕವಾಗಿದ್ದವು.

ಕಾಡು ಕಾದಂಬರಿಯಲ್ಲಿ ಬರುವ ಬಾಲಕ ಕಿಟ್ಟಿ ಮುಗ್ಧ ಮನಸ್ಸಿನವನಾಗಿದ್ದಾನೆ. ಅವನು ಪರಿಸರದ ಸುತ್ತ ನಡೆಯುವ ಹಲವು ವಿಸ್ಮಯಗಳನ್ನು ತಿಳಿದುಕೊಳ್ಳಲು ಪ್ರಯತ್ನಸಿ ವಿಫಲನಾಗುತ್ತಾನೆ. ಇಲ್ಲಿ ಬರುವ ಪಾತ್ರಗಳ

ನೈತಿಕ, ಅನೈತಿಕ ನಡವಳಿಕೆಗಳು, ಮಾತುಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ. ಕೆಲವೊಂದು ಸಾಂಪ್ರದಾಯಿಕ ಸಂಗತಿಗಳು ಅವನ ಮೇಲೆ ಗಾಢವಾದ ಪ್ರಭಾವವನ್ನು ಬೀರಿದಾಗ ಅದು ದ್ವಂದ್ವವಾಗಿ ಕಂಡುಬರುತ್ತದೆ. ಅವನು ಅವರ ಪೂರ್ವಜರನ್ನು ಮತ್ತು ಕೆಲವು ಸಂಪ್ರದಾಯಗಳನ್ನು ಪ್ರತಿಭಟಿಸುವ ವ್ಯಕ್ತಿಯಾಗಿ ಕಂಡುಬರುತ್ತಾನೆ. ಈ ಕಾದಂಬರಿಯಲ್ಲಿ ಬರುವ ಹಿರಿಯ ಪಾತ್ರಗಳು ಹೇಗೆ ತಮ್ಮ ಗೌರವಗಳಿಗೆ ಧಕ್ಕೆ ಬರದಂತೆ ತಾವು ಕಾಪಾಡಿಕೊಂಡು ಬಂದಿರುವ ಸಾಂಪ್ರದಾಯಿಕ ಕ್ರೌರ್ಯ, ಅಸೂಯೆ, ಶೋಷಣೆಯನ್ನು ಈ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಆದರೇ ಜಗತ್ತನ್ನು ತನ್ನ ಮುಗ್ಧ ದೃಷ್ಟಿಕೋನದಿಂದ ನೋಡುವ ಪಾತ್ರವಾಗಿ ಕಿಟ್ಟಿ ಅವುಗಳನ್ನು ಕಂಡು ಪ್ರತಿಭಟಿಸಲಾರದೇ ಅಸಹಾಯಕನಾಗಿ ಮರುಗುತ್ತಾನೆ.

ಕೆಂಚ ಮತ್ತು ದೇವಿಯರ ಆಕ್ರಮ ಸಂಬಂಧವನ್ನು ಪ್ರಶ್ನಿಸಿ ಕೆಂಚನಿಗೆ ಹೊಡೆಯುವಾಗ ಕಿಟ್ಟಿಯ ಮನಸ್ಸು ಅಯ್ನೋರ ಮತ್ತು ಕಾಳಿಯ ಆಕ್ರಮ ಸಂಬಂಧದ ಬಗ್ಗೆ ಅವರ ಚಿಕ್ಕಪ್ಪನಿಗೆ ಹೇಳಿದಾಗ ಕಿಟ್ಟಿಗೇ ಒದೆ ಬಿದ್ದಿರುತ್ತವೆ. ಅಯ್ನೋರನ್ನು ಪ್ರಶ್ನಿಸುವವರೇ ಇಲ್ಲಾ. ಆಯ್ನೋರೇ ಕೆಂಚನಿಗೆ ಬುದ್ಧಿ ಮಾತನ್ನು ಹೇಳುವುದು ಕಿಟ್ಟಿಯ ಮನಸ್ಸಿನಲ್ಲಿ ಅವರ ಬಗ್ಗೆ ಅಸೂಯೆಯನ್ನು ಉಂಟುಮಾಡುತ್ತದೆ. ಹಾಗು ಚಿಕ್ಕಪ್ಪ ಚಂದ್ರೇಗೌಡರು ಹೊಸೂರಿನ ಬಸಕ್ಕನ ಜೊತೆ ಸಂಬಂಧ ಹೊಂದಿದ್ದಾಗಲೂ ಅವರನ್ನು ಯಾರೂ ಪ್ರಶ್ನಿಸುವುದಿಲ್ಲ. ಇಂತಹವರೇ ಪಂಚಾಯ್ತಿಯಲ್ಲಿ ನ್ಯಾಯ ಹೇಳುವುದಾದರೂ ಕೆಂಚ ಇದನ್ನು 'ಬುಡಯ್ಯ ನಾನೇನು ನಿನ್ನ ಹಟ್ಟಿಗೆ ಬಂದಿತ್ತಿಲ್ಲ.' ಎಂದು ಪ್ರತಿಭಟಿಸುತ್ತಾನೆ. ಇವನನ್ನು ಸಾಯಬೀಳ ಹೊಡೆದಾಗ ಕಿಟ್ಟಿಯು ಪಂಚಾಯ್ತಿಯವರನ್ನು ಮನಸ್ಸಿನಲ್ಲೇ ಬೈದುಕೊಳ್ಳುತ್ತಾನೆ. ಕಾದಂಬರಿಯಲ್ಲಿ ತಾವು ನಂಬಿಕೊಂಡು ಬಂದ ಆಚಾರ ವಿಚಾರಗಳು, ನಂಬಿಕೆಗಳು ಎಷ್ಟು ಕ್ರೂರ ಎಂಬುದು ಅರಿವಿಗೆ ಬರುತ್ತದೆ. ತಮ್ಮ ಸಾಂಪ್ರದಾಯಿಕವಾದ ಮಡಿವಂತಿಕೆಗೆ ಕಟ್ಟು ಬಿದ್ದು ಹೇಗೆ ಜನರನ್ನು ಅಮಾನವೀಯವಾಗಿ ನಡೆಸಿಕೊಳ್ಳುತ್ತಾರೆ ಎಂಬುದನ್ನೂ ನೋಡಬಹುದು. ಗುಡಿ ಅಯ್ನೋರ ಹೆಂಡತಿ ಸಾವಿತ್ರಮ್ಮನವರು ಕಿಟ್ಟಿಯನ್ನು ಕಂಡೊಡನೆ 'ಶೂದ್ರ ಮುಂಡೇವ' ಎಂದು ಬೈಯುವುದು, ಎಷ್ಟೇ ದೂರದಲ್ಲಿ ನಿಂತಿದ್ದರೂ 'ಶೂದ್ರ ಮುಂಡೆವಾ ದೂರ ಹೋಗ್ರೋ' ಎಂದು ಬೈಯುವುದು ಅವರ ಅಮಾನವೀಯ ನಡವಳಿಕೆಯನ್ನು ಸೂಚಿಸುತ್ತದೆ. ಇಂತಹ ಮಡಿವಂತ ಸಂಪ್ರದಾಯಗಳ ವಿರುದ್ಧ ಪ್ರತಿಭಟನೆಗೆ ನಿಲ್ಲುವಂತೆ ಹೊಸ ಆಲೋಚನೆಯ ಪ್ರಗತಿಪರ ಬಾಲರಕರು ಕಿಟ್ಟಿ ಮತ್ತು ರಾಜು ಇಬ್ಬರೂ ಸಾವಿತ್ರಮ್ಮನವರ ಮಡಿಸೀರೆಯ ಮೇಲೆ ಉಚ್ಚೆ ಮಾಡುವುದರ ಮೂಲಕ ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಾರೆ.

ಕಾಡು ಕಾದಂಬರಿಯ ಕಿಟ್ಟಿ ತನಗಿಂತ ದೊಡ್ಡವರು ಮಾಡುವ ತಪ್ಪುಗಳನ್ನು ನೋಡಿದ್ದಾನೆ, ಆದರೇ ಸಣ್ಣವರು ಮಾಡುವ ತಪ್ಪುಗಳಿಗೆ ಕೊಡುವ ಶಿಕ್ಷೆಯನ್ನು ಪ್ರತಿಭಟಿಸುತ್ತಾನೆ. ನಾಗಿಯ ಅಜ್ಜಿಯು ನಾಗಿಯನ್ನು ಆಟವಾಡಲೂ ಬಿಡದೆ 'ಗಂಡುಭೀರಿಯ ಹಾಗೆ ಆಡಕ್ಕೋಗು' ಎಂದು ಬೈಯುವುದು, ನಾಗಿ ಚಿಕ್ಕಮ್ಮ ಕಲ್ಯಾಣಿಯನ್ನು 'ನನ್ನ ಮನೆಗೆ ದೇವ್ರು ದಿಂಡ್ರು ಕಾಲಾಕದಂಗೆ ಮಾಡಬುಟ್ಟಲ್ಲೆ ಕುಲಗೆಟ್ಟ ರಂಡೆ' ಎಂದು ಬೈಯುವುದು, ಹಿರಿಯರಾಗಿಯೂ ಕೇವಲ ಮಾನವೀಯತೆಯನ್ನು ಮರೆಯದೇ ಶೋಷಣೆ ಮಾಡುವ ಅಜ್ಜಿಯನ್ನು ಅದು ಸಾಯಲಿ ಎಂದ ರೊಚ್ಚಿನಿಂದ ಹೇಳುತ್ತಾನೆ. ಊರಿನ ಪ್ರಮುಖರಲ್ಲಿ ಒಬ್ಬನಾದ ಚಂದ್ರೇಗೌಡ ವೈಯಕ್ತಿಕವಾಗಿ ತನ್ನ ಹೆಂಡತಿಯೊಂದಿಗೆ ಸದಾ ಮುನಿಸಿನಿಂದಲೇ ಇರುತ್ತಾನೆ. ಕೆಂಚ ಮತ್ತು ದೇವಿಯ ಸಂಬಂಧದಂತೆ ಅವರು ತನ್ನ ಹೆಂಡತಿ ಇದ್ದರೂ ಬಸಕ್ಕನೊಂದಿಗೆ ಸಂಬಂಧ ಹೊಂದಿರುತ್ತಾರೆ ಮತ್ತು ಸದಾ ತನ್ನ ಪ್ರತಿಷ್ಠೆಗಾಗಿ ಒಂದಲ್ಲಾ ಒಂದು ಸುದ್ದಿಯಲ್ಲಿರುತ್ತಾರೆ. ಕೆಂಚನ ಅಕ್ರಮವನ್ನು ತಿಳಿದು ಕೆಂಚನನ್ನು, ದೇವಿಯನ್ನು ಹೊಡೆಯುವ ಚಂದ್ರೇಗೌಡ ಅಯ್ನೋರ ಮತ್ತು ಕಾಳಿಯ ಸಂಬಂಧವನ್ನು ತಿಳಿದು ಕಿಟ್ಟಿಗೆ ಬಿಗಿದಿರುತ್ತಾರೆ. ಅವನು ಕೇವಲ ಪ್ರತಿಷ್ಠೆ ಮತ್ತು ಗೌರವಗಳಿಗಾಗಿ ಬದುಕುವ ವ್ಯಕ್ತಿಯಂತೆ ಕಂಡುಬಂದದ್ದರಿಂದ ಅವನು ಅಜ್ಜಿ ಕತೆಯಲ್ಲಿ ಬರುವ ರಾಕ್ಷಸನಾಗಿ ಕಿಟ್ಟಿಗೆ ಕಂಡುಬರುತ್ತಾನೆ.

ಹೊಸೂರಿನ ಗಲಾಟೆಯಲ್ಲಿ ಚಂದ್ರೇಗೌಡ ಅತ್ಯಂತ ಕ್ರೌರ್ಯದಿಂದ ವರ್ತಿಸುತ್ತಾನೆ. ತನ್ನ ಸೋಲನ್ನು ತನ್ನ ದೌರ್ಬಲ್ಯವನ್ನು ಒಪ್ಪಿಕೊಳ್ಳಲು ಅವನು ಇಷ್ಟಪಡುವವನಲ್ಲ. ತನ್ನ ಮನೆತನದ ಒಕಳಿ ಆಟದ ಗೆಲುವೇ ಅವನಿಗೆ ಮುಖ್ಯವಾಗಿತ್ತು. ಈ ಘರ್ಷಣೆಯಲ್ಲಿ ಅವನು ತನ್ನ ಹಿಂದಿನ ಮನೆತನದವರು ಸಂಪಾದಿಸಿಕೊಂಡು ಬಂದಿದ್ದ ಗೌರವವನ್ನು ಕಳೆದುಕೊಳ್ಳುವಂತೆ, ತನ್ನ ಮನೆತನದವರು ಉಪಯೋಗಿಸುತ್ತಿದ್ದ ಹಂಡೆಯನ್ನು ಕಳೆದುಕೊಂಡಿರುತ್ತಾರೆ. ತನ್ನ ತಲೆತಲಾಂತರದಿಂದ ಪೊಲೀಸಿನವರ ಜೊತೆ ನಡೆಯದ ಚಂದ್ರೇಗೌಡ ಪೊಲೀಸಿನವರೊಂದಿಗೆ ಅಪರಾಧಿಯಂತೆ ನಡೆಯುತ್ತಾನೆ. ಹಿಂದಿನ ಎಲ್ಲಾ ಗೌರವವನ್ನೂ ಒಂದೊಂದಾಗಿ ಕಳೆದುಕೊಳ್ಳುವಂತೆ ತನ್ನ ಜಮೀನ್ದಾರಿಕೆ, ತನ್ನ ಗೌಡಿಕೆ, ಸಿಟ್ಟು, ದ್ವೇಷದಿಂದಾಗಿ ಪೊಲೀಸ್ ಸ್ಟೇಷನ್ ಮತ್ತು ನ್ಯಾಯಾಲಯಗಳಿಗೂ ಅಲೆಯುವಂತಹ ಸ್ಥಿತಿಯನ್ನು ತಲುಪಿರುತ್ತಾನೆ. ಊಳಿಗಮಾನ್ಯ ವ್ಯವಸ್ಥೆಯು ತನ್ನ ಅಸ್ತಿತ್ವವನ್ನು ಕಳೆದುಕೊಂಡಾಗ ಎಲ್ಲರಿಗೂ ಇರುವಂತಹ ಸ್ವತಂತ್ರ ಮತ್ತು ರಕ್ಷಣೆಗಳನ್ನು ಉಪಯೋಗಿಸುವ ಪದ್ಧತಿಯು ಪೊಲೀಸ್‌ನವರ ಮುಖಾಂತರ ಈ ಕಾದಂಬರಿಯಲ್ಲಿ ಕಂಡುಬರುತ್ತದೆ. ಆಧುನಿಕ ಸೌಲಭ್ಯಗಳಿಗೆ ಯಾವುದೇ ತಾರತಮ್ಯದ ಪ್ರಶ್ನೆ ಬರುವುದಿಲ್ಲ. ಇಲ್ಲಿ ಎಲ್ಲರೂ ಸಮಾನರಾಗಿರುತ್ತಾರೆ. ಆದ್ದರಿಂದಲೇ ತಪ್ಪು ಮಾಡಿದ ಚಂದ್ರೇಗೌಡ ಪೊಲೀಸರೊಂದಿಗೆ ಪೊಲೀಸ್ ಠಾಣೆಗೆ ನಡೆಯುತ್ತಾನೆ. ಈ ಎಲ್ಲದರ ನಡುವೆಯೂ ಊರಿನ ಇನ್ನೊಂದು ಮಹತ್ವದ ಘಟನೆಯೆಂದರೆ ಶಿಂಗಾರಿಗೌಡನ ಹೆಂಡತಿ ನಾಗಿಯ ಚಿಕ್ಕಮ್ಮ ಕಲ್ಯಾಣಿ ಹೊಲೇರ ಹನುಮನ ಜೊತೆ ಓಡಿ ಹೋಗಿದ್ದು. ಚಿತ್ರಹಿಂಸೆಯನ್ನು ಸಹಿಸಲಾರದೇ ತನಗೆ ಇಷ್ಟವಾದ ಹಟ್ಟಿಯ ಜೀತದ ಆಳಿನೊಂದಿಗೆ ಇವಳು ಓಡಿಹೋದದ್ದು. ಊರಿನ ಇಷ್ಟೆಲ್ಲಾ ಅನಾಹುತಗಳು ನಡೆದು ಕೊನೆಗೆ ಇಡೀ ಒಂದು ಊರಿನ ಜನ ಅಸಹಾಯಕರಾಗಿ ನಿಲ್ಲುವಂತಾಗುತ್ತದೆ. ಚಂದ್ರೇಗೌಡರು ತಮ್ಮ ಕ್ರೌರ್ಯವನ್ನು ತೀರಿಸಿಕೊಂಡಿದ್ದರಿಂದ ಒಂದು ಮನೆ ಅವನತಿಯನ್ನು ಕಾಣುವಂತಾಯಿತು.

ಈ ಊರಿನ ಮತ್ತೊಂದು ಘಟನೆಯೆಂದರೆ ರುದ್ರನ ತಂಗಿ ಸಾವಿತ್ರಮ್ಮ ಮನೆಯಲ್ಲಿ ನೇಣುಹಾಕಿಕೊಳ್ಳುವುದು. ದೊಡ್ಡಗೌಡರ ಹೊಸ ಹಟ್ಟಿ ಕೆಲಸದವನಾದ ಭಾಸ್ಕರನಿಂದ ಬಸಿರಾಗಿದ್ದು ಅದನ್ನು ಮುಚ್ಚಿಡಲು ಸಾಧ್ಯವಾಗದೇ ಸಾವಿತ್ರಮ್ಮ ನೇಣುಹಾಕಿಕೊಂಡಿರುತ್ತಾಳೆ. ಎಲ್ಲಾ ಅನೈತಿಕ ಸಂಬಂಧಗಳಿಗೂ ಶಿಕ್ಷೆಕೊಡುವ ಚಂದ್ರೇಗೌಡ ಈ ಸಾವಿಗೆ ಕಾರಣನಾದ ಭಾಸ್ಕರನಿಗೆ ಶಿಕ್ಷೆಯನ್ನೇ ನೀಡುವುದಿಲ್ಲ. ಬದಲಾಗಿ ಈ ಹೆಣವನ್ನು ಬೆಳಗಾಗುವುದರೊಳಗೆ ಸುಟ್ಟುಬಿಡಬೇಕೆಂದು, ಇಲ್ಲವಾದರೆ ಪುಟ್ಟಸ್ವಾಮಿಯೇನಾದರೂ ಪೊಲೀಸಿನವರಿಗೆ ಮೂಗರ್ಜಿ ಕೊಟ್ಟರೆ ಎಂಬ ಭಯದಿಂದ ರಾತ್ರಿಯೇ ಆ ಕೆಲಸವನ್ನು ಮುಗಿಸುತ್ತಾನೆ. ಸಿಕ್ಕಿಹಾಕಿಕೊಂಡರೆ ಪೊಲೀಸು ಕೋರ್ಟು ಎಂದು ಅಲೆಯಬೇಕಾಗುತ್ತದೆ ಎಂಬ ಭಯವೂ ಕಾಡಿರುತ್ತದೆ. ಬುಜಂಗಯ್ಯನ ದಶಾವತಾರದಲ್ಲಿಯೂ ಮಾದಳ್ಳಿಗೆ ಬಸ್ಸುಗಳು ಪ್ರಾರಂಭವಾಗಿ ನಂತರದಲ್ಲಿ ಎರಡೆರಡು ಬಸ್ಸುಗಳು ಓಡಾಡಲು ಪ್ರಾರಂಭವಾಗುತ್ತವೆ. ಕೊಪ್ಪಲಿಗೆ ಬಸ್ಸುಗಳಲ್ಲದೇ ಆಧುನಿಕ ನಾಟಕದ ದಿರಿಸುಗಳನ್ನು ತುಂಬಿಕೊಂಡು ಲಾರಿಯೂ ಬಂದು ಬಂದಹಾಗೆಯೇ ಹಿಂದಿರುಗಿ ಹೋಗಿರುತ್ತದೆ. ಈ ಊರಿಗೆ ಬಸ್ಸು ಬರುತ್ತಿದ್ದುದರಿಂದ ಕೊಪ್ಪಲಿನಲ್ಲಿ ಬುಜಂಗಯ್ಯ ಒಂದು ಹೋಟೆಲನ್ನೂ ಇಟ್ಟುಕೊಂಡಿದ್ದನು. 'ಅಗುಂತಕ'ದಲ್ಲಿ ಬರುವ ಕಿಟ್ಟಿಯ ಪಾತ್ರವೂ ಒಂದು. ಇವನು ಯಾರೋ ಬರುತ್ತಾರೆ ಎಂದು ಬೆಳಗಿನಿಂದಲೂ ಅಂದುಕೊಂಡವನು ಶಾಲೆಯಲ್ಲಿ ಕೂತು ಒಂದು ಕಪ್ಪು ಬಣ್ಣದ ಕಾರನ್ನು ಕಂಡು ಆಶ್ಚರ್ಯಗೊಂಡಿರುತ್ತಾನೆ. ಶಾಲೆ ಮುಗಿಸಿ ಮನೆಗೆ ಬರುವಾಗ ಅದರ ಚಕ್ರದ ಗುರುತುಗಳೂ ಕಂಡುಬರುತ್ತವೆ. ಮನೆಯನ್ನು ಮುಟ್ಟಿದಾಗ ಅವನ ಅಜ್ಜನ ಮನೆಯ ಎದುರಿಗೆ ಕಾರು ನಿಂತಿರುವುದನ್ನು ಕಂಡು ಆಶ್ಚರ್ಯಗೊಂಡು ಒಳಗೆ ಬಂದಾಗ ಅವನ ಅಜ್ಜ ಸಾವನ್ನಪ್ಪಿರುತ್ತಾನೆ. ಬೆಳಗಿನಿಂದಲೂ ಯಾರೋ ಬರುತ್ತಾರೆ ಎಂದುಕೊಳ್ಳುತ್ತಿದ್ದುದು ನಿಜವಾಗಿ ಅದು ಆಧುನಿಕ ಐಷಾರಾಮಿ ಜೀವನದ ಕಾರಿನ ಆಗಮನ ಅವನ ಅಜ್ಜನ ಸಾವಿಗೆ ಮೃತ್ಯುವಿನಂತೆ ಬಂದಿತು ಎಂದು ತಿಳಿದುಬರುತ್ತದೆ.

ಗೋಡೆ ಕಾದಂಬರಿಯ ಕಿಟ್ಟಿ ಕಾಡು ಕಾದಂಬರಿಯ ಕಿಟ್ಟಿಯ ಮುಂದುವರಿದ ಪಾತ್ರದಂತೆ ಕಂಡುಬರುತ್ತದೆ. ಕಾಡುವಿನ ಕಿಟ್ಟಿಯಂತೆ ಎಲ್ಲವನ್ನೂ ಇನ್ನೊಬ್ಬರಿಂದ ತಿಳಿದುಕೊಳ್ಳುವ ಬದಲು ಸ್ವತಂತ್ರನಾಗಿ ಯೋಚಿಸುವ ವ್ಯಕ್ತಿಯಂತೆ ಹೆಚ್ಚು ಕಡಿಮೆ ಪ್ರಜ್ಞಾವಂತನಂತೆ ಕಂಡುಬರುತ್ತಾನೆ. ತನ್ನ ಮನೆಯ ಹಿನ್ನೆಲೆ ಮತ್ತು ವಾಸ್ತವ ಸ್ಥಿತಿಯನ್ನು ಯೋಚಿಸುವ ಗಂಭೀರ ವ್ಯಕ್ತಿಯಾಗಿರುತ್ತಾನೆ. "ನಾವೂ ಎಲ್ಲಾ ಯೇಳಾಯ್ತು ಒಂದಾಗಿದ್ರೆ ಎಲ್ಲಾರ್ಗು ಚಂದ. ನೀವಿಂಗೆ ಆಟ ಮಾಡಿ ಯಾವ ಕ್ಯಾಟೆ ಗೆದ್ದಿರೋ ಕಾಣೆ? ಇಸ್ಸರ ಮ್ಯಾಲೆ ನಿಮ್ಮಿಷ್ಟ."' ಎಂದು ಚಿಕ್ಕತ್ತೆ ಚಿನ್ನಮ್ಮನಿಗೆ ಹೇಳುತ್ತಾಳೆ. ಆದರೇ ಚಿನ್ನಮ್ಮಳದು ಮಾತ್ರ ಹಿಡಿದಿದ್ದೇ ಹಠ. ಆ ಒಟ್ಟು ಕುಟುಂಬದಿಂದ ಬೇರೆಯಾಗುವುದೇ 'ಪಾಲಾಗುವ ತನಕ ಕಾಲಾಕಕ್ನೆಲ್ಲಾ' ಎಂಬುದೊಂದೆ. ಆದರೇ ತಾಯವ್ವ ತನ್ನ ಹಿರಿಯರು ಬಾಳಿಬದುಕಿದ ಮನೆ ಪಾಲಾಗಬಾರದು, ಮನೆಯ ಮರ್ಯಾದೆಯನ್ನು ಬೀದಿಗೆ ತರಬಾರದು, ಜನರು ಈ ಮನೆಯ ಮೇಲಿಟ್ಟಿರುವ ಗೌರವ ಕಡಿಮೆಯಾಗಬಾರದು ಎಂದು ಹಂಬಲಿಸುತ್ತಾಳೆ.

ಕಿಟ್ಟಿ ಶಾಲೆಗೆ ಹೋಗುವುದು, ಚೆನ್ನಾಗಿ ಓದುವ ಹಂಬಲವುಳ್ಳವನು. ಆದರೆ ಅವನ ಜೊತೆಗಿರುವ ಸೀನ ಶಾಲೆಯಲ್ಲಿರುವ ಭೂಗೋಳ, ಚರಿತ್ರೆ ಪಾಠಮಾಡುವ ಶಿವಯ್ಯ ಹೊಲೇರ ಜಾತಿಯವ ಎಂಬುದು ತಿಳಿದು ಆಶ್ಚರ್ಯ ಪಡುತ್ತಾನೆ. ಕೇವಲ ಜೀತಕ್ಕೆ ಎಂಬಂತೆ ಇರುವ ಹೊಲೆಯರು ಮೇಷ್ಟರಾಗುವುದೆಂದರೇ ಆಶ್ಚರ್ಯವೇ. ಕಾಡು ಕಾದಂಬರಿಯಲ್ಲಿ ಬರುವ ಹೊಲೆಯರೆಲ್ಲರೂ ಗೌಡರ ಮನೆಯಲ್ಲಿ ಜೀತಕ್ಕಿದ್ದವರೇ. ಕಿಟ್ಟಿ ಇವರ ಬುದ್ಧಿವಂತಿಕೆಯನ್ನು ಮೆಚ್ಚಿಕೊಳ್ಳುತ್ತಾನಾದರೂ ಸೀನನು ಮಾತ್ರ ತನ್ನ ಸಂಪ್ರದಾಯ ಬುದ್ಧಿಯನ್ನು ಬದಲಿಸಿಕೊಳ್ಳುವುದಿಲ್ಲ. ಅವರ ಹೆಸರು ಬಂದಾಗಲೆಲ್ಲಾ ಸತ್ತ ದನ, ಎಮ್ಮೆ ತಿನ್ನೊ ಜಾತಿಗೆ ಮೇಷ್ಟರ ಕೆಲಸ ಅಂದರೆ ಅದೇನು ಐಲಾಟವಾ? ಎಂದು ಅಲ್ಲಗಳೆಯುತ್ತಾನೆ. 'ಬುಜಂಗಯ್ಯನ ದಶಾವತಾರ'ದಲ್ಲಿ ಬರುವ ಗೋವಿಂದರಾಜು ಎನ್ನುವ ಬ್ರಾಹ್ಮಣ ಮೇಷ್ಟರ ಜೊತೆಗೆ ಬುಜಂಗಯ್ಯನ ಹೋಟೆಲಿಗೆ ಇನ್ನೊಬ್ಬ ಹರಿಜನ ಮೇಷ್ಟರು ಬರುವಾಗಲೂ ಅಲ್ಲಿಗೆ ಬರುತ್ತಿದ್ದ ಹಲವಾರು ಸಂಪ್ರದಾಯವಾದಿ ಲಿಂಗಾಯಿತರು ಸೀನನಿಗಿಂತಲೂ ತೀವ್ರವಾಗಿ ಸಂಘರ್ಷಕ್ಕಿಳಿಯುತ್ತಾರೆ. ಹರಿಜನರು ಎಷ್ಟೇ ಶುಚಿಯಾಗಿದ್ದರೂ, ವಿದ್ಯಾವಂತರಾದರೂ ಅವರನ್ನು ನಡೆಸಿಕೊಳ್ಳುವ ಚಿತ್ರಣ ಕಣ್ಣಿಗೆ ಕಟ್ಟುವಂತೆ ಕಾಣುತ್ತದೆ. ಒಂದು ಸ್ಥಾಪಿತ ಸಮಾಜದಲ್ಲಿ ಅಸ್ಪೃಶ್ಯತೆ ಎಂಬುದು ಅಥವಾ ಶೋಷಣೆ ಎಂಬುದು ಎಷ್ಟೊಂದು ತೀವ್ರವಾಗಿ ನಡೆದುಕೊಂಡು ಬಂದಿದೆ ಎಂದರೆ ಭಾರತದ ಜಾತಿ ವ್ಯವಸ್ಥೆಯಲ್ಲಿ ಕೆಳಜಾತಿಯಲ್ಲಿ ಹುಟ್ಟಿದವರೆಲ್ಲಾ ಕೇವಲ ಜೀತಕ್ಕೆ, ಮಲ ಹೊರುವುದಕ್ಕೆ, ದನ ತಿನ್ನುವುದಕ್ಕೆ ಸಂಬಂಧಿಸಿದವರು ಎಂಬ ಅಭಿಪ್ರಾಯ ಸಾಂಪ್ರದಾಯಿಕವಾಗಿ ನಡೆದುಕೊಂಡು ಬಂದಿದೆ. ಇಲ್ಲಿ ಶಿಕ್ಷಣವನ್ನು ಪಡೆದು ಉದ್ಯೋಗವನ್ನು ಹೊಂದಿದಾಗಲೂ ಸ್ಥಾಪಿತವಾದ ಈ ಹಳೆಯ ನಂಬಿಕೆಗಳನ್ನು ಅಳಿಸಲು ಸಾಧ್ಯವಾಗುತ್ತಿಲ್ಲ. ಇಂದಿಗೂ ಇದು ಬೂದಿಮುಚ್ಚಿದ ಕೆಂಡದಂತೆ ಇರುವುದನ್ನು ಈ ನಾಗರೀಕ ಸಮಾಜದಲ್ಲಿಯೂ ಕಾಣಬಹುದು. ಆದರೂ ಬದಲಾವಣೆ ಎನ್ನುವುದು ನಿರಂತರವಾಗಿ ನಡೆಯುತ್ತಿರುವ ಕ್ರಿಯೆಯಾಗಿದೆ.

ಓದು ಬರಹವನ್ನು ಕಲಿತ ಕಿಟ್ಟಿಯಲ್ಲಿ ಕೆಲವು ವಿಶಿಷ್ಟವಾದ ಪದಗಳು ಹೊರಹೊಮ್ಮಿ ನಯವಾದ ಮಾತುಗಾರಿಕೆ ರೂಢಿಸಿಕೊಂಡಿರುತ್ತಾನೆ. ತನ್ನ ತಾಯಿಯನ್ನು ತನ್ನ ಗುರುಗಳ ಮನೆಗೆ ಕರೆದುಕೊಂಡು ಹೋದಾಗ ಹಳ್ಳಿಯ ಭಾಷೆಯೇ ಸಹಜವಾಗಿ ಬಾಯಿತುಂಬಿ ಬರುತ್ತದೆ. ಯಾವುದಕ್ಕೂ ತಾಯವ್ವ ಅಂಜಿಕೆ ಪಡುವುದಿಲ್ಲ. ಮೀನಾಕ್ಷಿಯ ತಾಯಿ ಕಿಟ್ಟಿ ಮತ್ತು ಅವನ ತಾಯಿಗೆ ಎರಡು ಪ್ಲೇಟ್ ಉಪ್ಪಿಟ್ಟು ತಂದಾಗ ಈಗ್ತಾನೆ ಉಣ್ಕಂಡು ಬಂದೀವಿ ಇದೆಲ್ಲ ಬ್ಯಾಡಿ ಎಂದು ಹೇಳಿದಾಗ ಕಿಟ್ಟಿ ಮುಜುಗರಪಟ್ಟುಕೊಂಡು 'ಉಣ್ಕಂಡು' ಅನ್ನಬಾರದು 'ಊಟಮಾಡಿ' ಎನ್ನಬೇಕು, ಎಂದಾದರೂ ಹೇಳಬೇಕಾಗಿತ್ತು ಎಂದು ಮನಸ್ಸಿನಲ್ಲಿಯೇ ಅಂದುಕೊಳ್ಳುವುದು ತನ್ನ ತಾಯಿಯೂ ಮುಂದುವರಿದು ಪೇಟೆಯ ಅಥವಾ ನಗರದಲ್ಲಿ ಉಪಯೋಗಿಸುವ ಭಾಷೆಯನ್ನು ಮಾತನಾಡಲಿ, ನಾವೂ ನಾಗರೀಕತೆಯನ್ನು ಅನುಸರಿಸುತ್ತಿದ್ದೇವೆ ಎಂಬುದು ಮೇಷ್ಟರ ಕುಟುಂಬಕ್ಕೆ ತಿಳಿಯಬೇಕು ಎಂಬುದಾಗಿರುತ್ತದೆ.

ನಮ್ಮ ಹಿಂದಿನ ತಲೆಮಾರುಗಳು ಹಲವಾರು ನಂಬಿಕೆಗಳನ್ನು ನಂಬಿಕೊಂಡು ಬಂದಿದ್ದಾರೆ. ಕಿಟ್ಟಿಯ ಅಜ್ಜಿ ಮತ್ತು ಅಮ್ಮ ಇಬ್ಬರೂ ಇವನನ್ನು "ಹುಟ್ಟಿದ ಮಗನ ಮುಖ ನೋಡದೆ ಅವರು ಸತ್ತರು. ಯಾವ ವಿಷಗಳಿಗೆಯಲ್ಲಿ ಇವನು ಹುಟ್ಟಿದನೋ ಹುಟ್ಟುತ್ತಿದ್ದ ಹಾಗೆಯೇ ಅಪ್ಪನನ್ನು ತಿಂದು ಹಾಕಿದ."[೨] ಎಂದು ಕೊಂಡಾಗ ಇಂತಹ ಹಲವಾರು ಸಂಘರ್ಷಗಳನ್ನು ಎತ್ತಿಹಿಡಿಯುವ ಅವನು ಮೌನವಾಗುತ್ತಾನೆ. ಇದರ ಅರ್ಥ ತಿಳಿಯದೇ ತನ್ನದೇನು ತಪ್ಪು ಎಂದು ಒಳಗೇ ಮರುಗುತ್ತಾನೆ. 'ನೆಲಗುಮ್ಮ'ದಲ್ಲಿ ಬರುವ ಕಿಟ್ಟಿಯ ಪಾತ್ರವೂ ಇಂತಹ ಹಿರಿಯರ ಮಾತುಗಳಿಂದ ನೋವನ್ನು ಅನುಭವಿಸುತ್ತದೆ. ಅವನ ವಿದ್ಯಾಭ್ಯಾಸ ಪೇಟೆಯಲ್ಲಿ ನಡೆದಿದ್ದು ಹಳ್ಳಿಯನ್ನು ಹಳ್ಳಿಯ ಸಂಪ್ರದಾಯವನ್ನು ಅವನು ನಂಬದಂತಾಗಿತ್ತು. ಅವನ ಅಜ್ಜಿಯು ಮಾತನಾಡುವಾಗ ಕಿಟ್ಟಿಯು ಹುಟ್ಟಿದಾಕ್ಷಣ ಅವನ ಅಪ್ಪ ಸತ್ತಿದ್ದು ಅವನು ಕೆಟ್ಟ ನಕ್ಷತ್ರದಲ್ಲಿ ಹುಟ್ಟಿದ್ದರಿಂದ ಎಂಬುದು ಅವನ ಅನಿಸಿಕೆ. ಆದರೇ ಅವನು ಯಾವುದೇ ಸಾವನ್ನು ಅಷ್ಟಾಗಿ ಯೋಚಿಸದೇ ಇರುತ್ತಾನೆ. ನಮ್ಮ ಹಿರಿಯರು ನಮ್ಮನ್ನು ಸಾಕುವುದು ಅವರ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳಲು ಎಂದು ತಿಳಿದ ಕಿಟ್ಟಿ ಅಜ್ಜಿಯ ಮೊಮ್ಮಗಳ ಮಗಳನ್ನು ಮದುವೆಯಾಗಲು ನಿರಾಕರಿಸುತ್ತಾನೆ. ಆದರೇ ಕಿಟ್ಟಿಗೆ ಅಂತರ ಜಾತಿ ವಿವಹಾದಲ್ಲಿ ಮನಸ್ಸಾಗಿದ್ದು ನಗರದಲ್ಲಿ ಒಬ್ಬಳನ್ನು ಪ್ರೀತಿಸುತ್ತಿರುತ್ತಾನೆ. ವಿಷಯ ತಿಳಿದ ಅಜ್ಜಿ "ತಾನು ಎತ್ತಿ ಆಡಿಸಿದ್ದವಳನ್ನು ಕಟ್ಟಿಕೊಳ್ಳದೇ ಯಾವಳೋ ಕುಲಗೆಟ್ಟವಳ್ನೆ ಕಟ್ಕೋತೀನಿ ಅಂತ ನಮ್ಮ ಮನೆ ದೇವ್ರು ದಿಂಡರ್‍ನೆಲ್ಲ ದೂರ ಮಾಡ್ಬುಡ್ತೀಯಲ್ಲೋ ಮನೆಹಾಳ"[೩] ಎಂದು ಬೈಯುವಾಗ ಚಿಕ್ಕಂದಿನಿಂದ ಅಜ್ಜಿಯನ್ನು ಅದೆಷ್ಟು ಉತ್ಕಟವಾಗಿ ಪ್ರೀತಿಸುತ್ತಿದ್ದನೋ ಅಷ್ಟೆ ದ್ವೇಷಿಸತೊಡಗುತ್ತಾನೆ. ಸಮಾಜದಲ್ಲಿ ಜನರು ತಮ್ಮನ್ನು ಎಷ್ಟು ಸೂಕ್ಷ್ಮವಾಗಿ ಗಮನಿಸುತ್ತಾರೆಂದರೇ ಪ್ರತಿಯೊಂದು ಚಟುವಟಿಕೆಯನ್ನು ಗಮನಿಸಿ ಮಾರ್ಗದರ್ಶನ ನೀಡುತ್ತಾರೆ. ಭಾಗ್ಯಕ್ಕ ಕಿಟ್ಟಿಗೆ ಅಕ್ಕನ ಮಗಳನ್ನು ಮದುವೆಯಾಗು ಎಂದು ಹೇಳಿದಾಗ ಕಿಟ್ಟಿಗೆ ಅವರ ಮನೆಯಲ್ಲಿ ತಿಂದದ್ದೆಲ್ಲಾ ಕಕ್ಕಿಬಿಡುವಷ್ಟು ಜಿಗುಪ್ಸೆಯಾಗುತ್ತದೆ. ಇಂತಹ ಎಲ್ಲವುಗಳನ್ನೂ ಕಿಟ್ಟಿ ದೂರಮಾಡುತ್ತಲೇ ಇರುತ್ತಾನೆ.

'ಸಂಬಂಧ' ಕತೆಯಲ್ಲಿ ಬರುವುದು ಕಿಟ್ಟಿಯ ಮುಂದುವರಿದ ಪಾತ್ರದಂತೆಯೇ ಕಂಡುಬಂದು ಅವನೇ ಕತೆಯನ್ನು ಹೇಳಿಕೊಳ್ಳುತ್ತಾ ಹೋಗುವಂತೆ ಅರ್ಥವಾಗುತ್ತದೆ. 'ಕಾಡು'ವಿನ ಕಿಟ್ಟಿಯು ಪ್ರಾಥಮಿಕ ಶಾಲೆಯನ್ನು ಕಲಿತು ನಂತರ 'ಗೋಡೆ'ಯಲ್ಲಿ ಮಾಧ್ಯಮಿಕ ಶಿಕ್ಷಣವನ್ನು ಕಲಿಯುತ್ತಾ ಮುಂದಿನ ಓದಿಗಾಗಿ ಮೈಸೂರಿಗೆ ಹೋಗಿ ಹೆಚ್ಚು ಕಲಿಯುವ ಹಂಬಲವನ್ನು ಉಳ್ಳವನಾಗಿದ್ದು 'ಸಂಬಂಧ' ಕತೆಯಲ್ಲಿ ತನ್ನ ಬಾಲ್ಯದ ಸ್ನೇಹಿತೆ ಲಲಿತಾಳ ಮತ್ತು ಅವಳ ಬ್ರಾಹ್ಮಣ ಸಂಪ್ರದಾಯಗಳನ್ನು ಟೀಕಿಸುತ್ತಾನೆ. ನಿರೂಪಕ ಮತ್ತು ಲಲಿತಾಳ ಸ್ನೇಹ ಬಾಲ್ಯದಿಂದಲೂ ಬಂದದ್ದು ಬಾಲ್ಯದಲ್ಲಿಯೇ ಬ್ರಾಹ್ಮಣರ ಸಂಪ್ರದಾಯಗಳನ್ನು ಅಲ್ಲಗೆಳೆಯುವ ಪ್ರಯತ್ನವನ್ನು ಮಾಡಿರುತ್ತಾನೆ. ಲಲಿತಾಳ ಕುಟುಂಬದವರು ಶೂದ್ರ ಸಮುದಾಯದ ಮಧ್ಯದಲ್ಲಿದ್ದರೂ ಅವರು ಅತ್ಯಂತ ಮಡಿವಂತರಾಗಿ ಜನರನ್ನು ವಂಚಿಸುವುದು ಕಂಡುಬರುತ್ತದೆ.

ಇಲ್ಲಿ ಬ್ರಾಹ್ಮಣ ದೇವರುಗಳೇ ಶ್ರೇಷ್ಠ, ಆದರೆ ಶೂದ್ರ ದೇವರುಗಳು ಬರೀ ಸುಳ್ಳು ಎಂದು, ತಾವು ಪೂಜೆ ಮಾಡಿದಾಗ ಪ್ರತಿಯೊಂದು ಕೆಲಸವೂ ಆಗುತ್ತದೆ ಎಂದು ಹೇಳಿಕೊಳ್ಳುತ್ತಾರೆ. ಆದ್ದರಿಂದಲೇ ಕಾಡಿನಿಂದ ದನಗಳು ಬರುವುದು ಸ್ವಲ್ಪ ತಡವಾದರೂ 'ಬಾಯ್ಕಟ್ಟು' ಮಾಡಿದರೆ ದನಗಳು ವಾಪಸ್ಸು ಬರುತ್ತವೆ ಎಂದು ನಂಬಿದ್ದರು. ಇದಕ್ಕೆ ಶೂದ್ರ ದೇವರುಗಳು ಕೆಲಸಮಾಡುವುದಿಲ್ಲಾ ಎಂದು ನಂಬಿಸಿದ್ದಾಗಿ ಲಲಿತಳ ಹಿರಿಯರು ಮಾತಾಡಿರುತ್ತಾರೆ. ಕಿಟ್ಟಿಯ ಕುತೂಹಲದ ಮನಸ್ಸು ಲಲಿತಳ ಮಾತನ್ನು ಕೇಳುತ್ತದೆ. ಏಕೆಂದರೆ ಅವರಿಬ್ಬರ ವಿಶ್ವಾಸದಲ್ಲಿ ನಂಬಿಕೆ ಲಲಿತ ತನ್ನ ಹಿರಿಯರಾಡುವ ಮಾತುಗಳನ್ನು ಹೇಳುತ್ತಾ "ನಿಮ್ಮ ಸಿದ್ದೇಗೌಡನ ಮೇಲೆ ಬರೋದು ದೇವ್ರಲ್ಲ, ಅದೊಂಥರ ಗಾಳಿಯಂತಪ್ಪ, ದೇವ್ರು ಗೌಡ್ರ ಜಾತಿಯವ್ರ ಮೇಲ್ಬರಲ್ವಂತೆ ನಮ್ಮ ಅಪ್ಪಯ್ಯ ಹೇಳ್ತು."[೪] ಎಂಬುದು ಬ್ರಾಹ್ಮಣರು ತಮ್ಮ ದೇವರಿಗೆ ಎಷ್ಟೆಲ್ಲಾ ಪ್ರಾಮುಖ್ಯತೆ ಕೊಟ್ಟು ಮಿಕ್ಕ ದೇವರಿಗೆ ಯಾವುದೇ ಪ್ರಾಮುಖ್ಯತೆ ಬರದಂತೆ ತಡೆಯುವುದು ಕಾಣುತ್ತದೆ. ಇದರಿಂದ ಬ್ರಾಹ್ಮಣ ದೇವರನ್ನು ಕಾಣುವ ಹಂಬಲ, ಕುತೂಹಲ

ನಿರೂಪಕನನ್ನು ಕಾಡುತ್ತದೆ. ಆಗ ಅವನು ಅವರ ಮನೆಯನ್ನು ಪ್ರವೇಶಿಸಬೇಕೆಂಬ, ಅವರ ದೇವರನ್ನ ಪೂಜಾ ವಿಧಾನವನ್ನು ನೋಡಬೇಕೆಂದು ಹಂಬಲಿಸುತ್ತಾನೆ. ಮತ್ತು ಹೊಸ್ತಿಲೊಳಗೆ ಕಾಲಿಡುವ ಪ್ರಯತ್ನವನ್ನ ಮಾಡಿದ್ದೇ ಒಂದು ಸಂಘರ್ಷಕ್ಕೆ ಕಾರಣವಾಗುತ್ತದೆ. ಆದ್ದರಿಂದಲೇ 'ಅಯ್ಯೋ ಶೂದ್ರ ಮುಂಡೇದೆ ಒಳಗೆ ನುಗ್ಗುಬಿಟ್ಟಲ್ಲೋ...' ಎಂದು ದೊಣ್ಣೆಯಿಂದ ಬಿಗಿಸಿಕೊಂಡಿರುತ್ತಾನೆ. "ನಿಮಗೊಂದು ಕಟ್ಟುನಿಟ್ಟಿಲ್ಲ ಶೂದ್ರಮುಂಡೇವ ನಾಳೆ ನಿಮ್ಮಜ್ಜನಿಗೆ ಹೇಳಿ ಸರಿಯಾಗಿ ಮಾಡಿಸ್ತೀನಿ"[8] ಎಂದು ಹೇಳುವಾಗ ತನ್ನ ಸಹಜವಾದ ಬ್ರಾಹ್ಮಣ ಸಂಪ್ರದಾಯದ ಶೋಷಣೆ ಎದ್ದು ಕಾಣುತ್ತದೆ. ತಾವು ಹೊಡೆದದ್ದಷ್ಟೇ ಅಲ್ಲದೆ ತನ್ನ ಕುಟುಂಬದವರೂ ಅವನನ್ನ ಮುಂದೆ ಈ ರೀತಿ ಮಾಡದಂತೆ ಹೆದರಿಸುತ್ತಾರೆ.

ಮುಂದೆ ಲಲಿತಾ ಮದುವೆಯಾಗಿ ನಗರ ಜೀವನವನ್ನು ಪ್ರಾರಂಭಿಸಿದಾಗ ಈ ಯಾವುದೇ ರೀತಿಯ ಕಟ್ಟುಕಟ್ಟಳೆಗಳೂ ಇರುವುದಿಲ್ಲ. ಬದಲಾಗಿ ಎಲ್ಲದರಲ್ಲೂ ಮೊದಲಿನಿಂದಲೂ ಉದಾರವಾಗಿದ್ದ ಲಲಿತ ತನ್ನ ಸಂಪ್ರದಾಯಗಳನ್ನು ಮುಂದುವರೆಸಿರುವುದಿಲ್ಲ. ಏಕೆಂದರೆ ಅದಕ್ಕೆ ನಗರ ಜೀವನವೇ ಕಾರಣವಾಗಿದೆ. ಮೊದಲಿನಿಂದಲೂ ಉನ್ನತವಾದ ಜೀವನ ಶೈಲಿಯನ್ನು ಹೊಂದಿದ್ದ ಬ್ರಾಹ್ಮಣ ಕುಟುಂಬವು ಆಧುನಿಕತೆಯಿಂದಾಗಿ ತನ್ನೆಲ್ಲಾ ಸಾಂಪ್ರದಾಯಿಕ ವಿಚಾರಗಳಿಂದ ಮುಕ್ತಿಗೊಂಡಿರುತ್ತದೆ. ಆದ್ದರಿಂದಲೇ ನಿರೂಪಕನನ್ನು ಮನೆಗೆ ಕರೆದೊಯ್ದು ಮನೆಯಲ್ಲಿ ಎಲ್ಲರಿಗೂ ನೀಡುವಂತೆ ಮರ್ಯಾದೆ, ಗೌರವ ಮತ್ತು ಆತಿಥ್ಯವನ್ನು ನೀಡುತ್ತಾಳೆ. ಇದೆಲ್ಲಕ್ಕೂ ಕಾರಣವೆಂದರೆ ಲಲಿತಳ ಗಂಡ ಮತ್ತು ಲಲಿತಳ ತಂದೆ ನಡುವಿನ ಜಗಳದಿಂದ ಒಂದು ವೇಳೆ ಇವರಿಬ್ಬರ ನಡುವೆ ಸಾಮರಸ್ಯ ಇದ್ದಿದ್ದರೇ ಶೂದ್ರನಾದ ನಿರೂಪಕ ಲಲಿತಳ ಮನೆಯೊಳಗೆ ಪ್ರವೇಶಿಸುತ್ತಿರಲಿಲ್ಲ ಎಂದು ತಿಳಿಯುತ್ತದೆ.

'ಪರಸಂಗದ ಗೆಂಡೆತಿಮ್ಮ' ಕಾದಂಬರಿಯು ಗ್ರಾಮೀಣ ಬದುಕಿನಲ್ಲಿ ಆಧುನಿಕತೆಯ ಪ್ರಭಾವದಿಂದ ಉಂಟಾಗುವ ಸಂಘರ್ಷ ಕಂಡು ಬರುತ್ತದೆ. ಗ್ರಾಮೀಣ ಜನರು ಈಗಾಗಲೇ ಒಪ್ಪಿಕೊಂಡಿರುವ ಒಂದು ಸಂಪ್ರದಾಯವು ಆಧುನಿಕ ವಸ್ತುಗಳ ಬಳಕೆಯಿಂದ ಆಧುನಿಕ ನಡವಳಿಕೆಗಳಿಂದ ಹೇಗೆ ತನ್ನನ್ನು ತಾನು ಬದಲಾಯಿಸಿಕೊಳ್ಳುತ್ತದೆ ಎಂಬುದು ಕಂಡುಬರುತ್ತದೆ.

ಗೆಂಡೆತಿಮ್ಮ ನಗರದಿಂದ ತಂದುಕೊಡುವ ಆಧುನಿಕ ವಸ್ತುಗಳಾದ ಪೌಡರು, ಗಂಧದೆಣ್ಣೆಗೂ ಮೊದಲು ಕೇವಲ ಅವನ ವ್ಯಾಪಾರ ಜನರ ನಿತ್ಯ ಬಳಕೆಯ ಎಲೆ, ಅಡಿಕೆ, ಬೀಡಿ, ಬೆಂಕಿಪೊಟ್ಟಣ, ಸೀಮೆಎಣ್ಣೆ, ಮಕ್ಕಳ ಸಣ್ಣಪುಟ್ಟ ತಿಂಡಿತಿನಿಸುಗಳಿಂದಲೇ ಪ್ರಾರಂಭವಾಗಿರುತ್ತದೆ. ಪ್ರತಿಯೊಂದು ವ್ಯಾಪಾರವೂ ವ್ಯಕ್ತಿಯೂ ಬದಲಾಗುವಂತೆ ಇವನ ಜೀವನಶೈಲಿ ಬದಲಾಗುವುದು ಮರಂಕಿಯ ಮದುವೆಯಿಂದ. ಮರಂಕಿಯ ಜೀವನವಿಧಾನವನ್ನು ಗಮನಿಸಿದ ಊರಿನ ಹೆಣ್ಣುಮಕ್ಕಳು, ಸೊಸೆಯರು ಅವಳಂತೆ ಇರಲು ಪ್ರಯತ್ನಿಸುವುದು ಕಂಡುಬರುತ್ತದೆ. ಮರಂಕಿ ಮೊದಲು ತನ್ನ ಮನೆಯ ನೀತಿಯನ್ನು ಬದಲಾಯಿಸಲು ಪ್ರಯತ್ನಿಸುತ್ತಾಳೆ. ಮೊದಲು ನಾಯಿ, ಕೋಳಿಗಳೆಲ್ಲಾ ಮನೆಯೊಳಗೆ ಬಂದಾಗ 'ಥೂ... ಅವು ಯೇಲುಗೀಲೆಲ್ಲ ತಿನ್ಕಂಡಬತ್ತವೆ. ಅವ್ನೆಂಗೆ ಒಳಕೆ ಸೇರಿಸ್ಕಳದು' ಎಂದಾಗ ಅತ್ತೆ ಬೇರಿಯಮ್ಮ 'ಒಳ್ಳೆ ಆರುವಗಿತ್ತಿ ಸುದ್ದ ಆಯ್ತಲ್ಲ ಇವಳ್ದು' ಎನ್ನುತ್ತಾಳೆ. ಹೀಗೆ ಶುರುವಾದ ಬದಲಾವಣೆಯು ಮನೆಯವರ ಎಲ್ಲರ ಮೇಲೂ ಆಗುತ್ತದೆ. ಮನೆಯ ಕಸ ಹೊಡೆಯುವುದು, ವಾರಕ್ಕೆ ಎರಡು ಬಾರಿಯಾದರೂ ಸ್ನಾನ, ದಿನ ಬಿಟ್ಟು ದಿನ ಸೀರೆ ಉಡುವುದು, ವಾರಕ್ಕೆ ಬಟ್ಟೆಗಳನ್ನು ಕೇವಲ ಸೌಳಿನಿಂದ ಒಗೆಯದೆ ಸಾಬೂನಿನಿಂದ ಒಗೆಯುವುದು, ತಲೆಗೆ ಗಂಧದೆಣ್ಣೆ, ಮುಖಕ್ಕೆ ಸ್ನೋ, ಪೌಡರ್, ಲಂಗ ಮತ್ತು ಬಾಡಿ, ಸಿಂಗಾರವಾದ ಸೀರೆ ಉಡುವುದು ಬೇರಿಯಮ್ಮನಿಗೆ ಹಿಡಿಸಲಾರದ ನೋವಾಗಿ ಮರಂಕಿಯೊಂದಿಗೆ ಸಂಘರ್ಷಕ್ಕಿಳಿಯುತ್ತಾಳೆ. ಗ್ರಾಮೀಣ ಬದುಕಿನಲ್ಲಿ ಸೊಸೆಯಂದಿರು ಅತ್ತೆಯೊಂದಿಗೆ ಜಗಳಕ್ಕಿಳಿಯುವುದನ್ನು ಮತ್ತು ಸಹಿಸಿಕೊಳ್ಳುವುದನ್ನೇ ಕಾಣುತ್ತೇವೆ.

ಒಂದು ಕುಟುಂಬ ಅಥವಾ ಒಂದು ಸಮಾಜ ಸ್ಥಿತ್ಯಂತರ ಹೊಂದಬೇಕಾದರೆ ಅದಕ್ಕೆ ಕ್ರಾಂತಿ, ಹಿಂಸೆ ನಡೆಯಬೇಕೆಂದೇನೂ ಇಲ್ಲ. ಕೇವಲ ಸಣ್ಣಪುಟ್ಟ ಘಟನೆಗಳೂ ಸಮಾಜವನ್ನು ಬದಲಾಯಿಸುವ ಸಾಧ್ಯತೆಯಿದೆ. ಸ್ವತಂತ್ರವನ್ನು ಪಡೆಯಬೇಕಾದರೆ ನಾವೇ ಸ್ವತಃ ಉಪ್ಪನ್ನು ತಯಾರಿಸಿಕೊಂಡದ್ದು, ವಿದೇಶಿ ವಸ್ತ್ರಗಳನ್ನು ವಿರೋಧಿಸಿದ್ದು ಮುಂತಾದವುಗಳೂ ಪ್ರಮುಖವಾಗಿಯೇ ನಿಲ್ಲುತ್ತವೆ. ಮತ್ತು ಸಮಾಜದ ಬದಲಾವಣೆಗೆ ಕಾರಣಗಳಾಗುತ್ತವೆ ಎಂಬುದನ್ನು ಗಮನಿಸಬಹುದು.

ಮರಂಕಿಯ ಈ ಬಗೆಯ ಜೀವನ ಕ್ರಮವು ಮೊದಲು ಪ್ರಭಾವ ಬೀರುವುದು ಗೆಂಡೆತಿಮ್ಮನ ಮೇಲೆ. ಅವನು ಈಗ ವಾರಕ್ಕೆರಡು ಸಲ ಸ್ನಾನ ಮತ್ತು ಬಟ್ಟೆಬದಲಾಯಿಸುವುದು ಎಣ್ಣೆ ಹಚ್ಚಿ ತಲೆಬಾಚುವುದು, ನಂಜನಗೂಡು ಹಲ್ಲುಪುಡಿಯಿಂದ ಹಲ್ಲು ತಿಕ್ಕುವುದನ್ನು ರೂಡಿಸಿಕೊಂಡಿರುತ್ತಾನೆ. ಮರಂಕಿ ಮತ್ತು ಗೆಂಡೆತಿಮ್ಮ ಇವರ ಜೀವನ ಶೈಲಿಯನ್ನು ಸಹಿಸಲಾರದ ಬೇದಿಯಮ್ಮ ಇವರಿಬ್ಬರ ವಿರುದ್ಧ ಜಗಳ ಕಾಯುತ್ತಾಳೆ. ಗೆಂಡೆತಿಮ್ಮ ಇಲ್ಲದ ವೇಳೆಯಲ್ಲಿ ಬೇದಿಯಮ್ಮ ಮತ್ತು ಗೂಳಾನಾಯ್ಕ ಮರಂಕಿಯನ್ನು ಒಡೆಯುತ್ತಾರೆ. ಇದು ಅತ್ತೆ ಮತ್ತು ಅವರ ಮನೆಯವರು ನೀಡುವ ಕಿರುಕುಳವನ್ನು ಎತ್ತಿ ಹಿಡಿಯುತ್ತದೆ. ಗೆಂಡೆತಿಮ್ಮ ಮತ್ತು ಅವನ ತಾಯಿಯ ಮಧ್ಯ ಜಗಳ ಪ್ರಾರಂಭವಾಗುತ್ತದೆ. ಆಗ ಗೆಂಡೆತಿಮ್ಮನು ಪೂರ್ತಿ ತಾಳ್ಮೆ ಕಳೆದುಕೊಂಡಿದ್ದು, ಮನೆಯ ಮಾಡೇ ಕಿತ್ತು ಹೋಗುವಂತೆ, ''ಲೇ ಮುದ್ಕಿ ಸಾಕು ನಿಲ್ಸು ನಿನ್ನ ಕಿರುಚಾಟ'' ಎಂದು ಕೂಗುತ್ತಾನೆ. ಇದು ಮನೆ ಇಬ್ಭಾಗವಾಗಲೂ ಕಾರಣವಾಗುತ್ತದೆ. ಮನೆ ತಕ್ಕ ಮಟ್ಟಿಗೆ ಸುಸಜ್ಜಿತ, ಇದೆಲ್ಲಕ್ಕಿಂತಲೂ ಮಿಗಿಲಾಗಿ ಆ ಮನೆಗೆ ಗ್ರಾಮ್‌ಫೋನು ಬಂದದ್ದು ಇದು ಇಡೀ ಹಳ್ಳಿಗೇ ಒಂದು ಹೊಸ ಬಗೆಯ ಮನರಂಜನೆ ನೀಡುವ ವಸ್ತುವಾಯಿತು. ಇದು ಮರಂಕಿಯ ವಯಸ್ಸಿನವರು ಸಹಜವಾಗಿ ಬಯಸುವ ಆಧುನಿಕ ಬದಲಾವಣೆಯಾಗಿದೆ. ಇದರಿಂದ ಇವಳ ಒಂಟಿತನ ದೂರವಾದರೂ ಅವಳ ಮನೆಯ ಮುಂದೆ ಯಾವಾಗಲೂ ಜನರಿರುವುದು ಕಿರಿಕಿರಿಯಾಗತೊಡಗುತ್ತದೆ. ಗೆಂಡೆತಿಮ್ಮ ಸಾಲುಂಡಿಯ ಗ್ರಾಮದಲ್ಲಿ ಎಲ್ಲರಿಗೂ ಬೇಕಾದ ಅತೀ ಅವಶ್ಯಕವಾದ ವ್ಯಕ್ತಿಯಾಗಿ ಕಾಣುತ್ತಾನೆ. ಮೇಲಿನ ಘಟನೆಗಳನ್ನು ನೋಡಿದಾಗ ಇಡೀ ಊರಿನ ಜನಗಳ ದೃಷ್ಟಿಯಲ್ಲಿ ಕುತೂಹಲ ಕೆರಳಿಸುವ ವ್ಯಕ್ತಿಯಾಗಿಯೂ ಕಂಡುಬರುತ್ತಾನೆ.

ಗ್ರಾಮೀಣ ಬದುಕಿನ ಜನರು ಆಧುನಿಕತೆಯ ಸೋಂಕಿನಿಂದ ಹೇಗೆ ತಮ್ಮದೇ ಆದ ಒತ್ತಡಗಳಿಗೆ ಮಣಿದು ಆಧುನಿಕತೆಯ ಕಡೆ ಮುಖಮಾಡುತ್ತಾರೆಂಬುದಕ್ಕೆ ಗೌವಳ್ಳಿಯ ಮಾಲೇಗೌಡರ ಮಗಳು ರತ್ನಿಯನ್ನು ಮೈಸೂರು ನಗರಕ್ಕೆ ಮದುವೆ ಮಾಡಲು ಇಚ್ಛಿಸಿದಾಗ ಮರಂಕಿಯು ಬಳಸುವ ವಸ್ತುಗಳ ಬಗ್ಗೆ ಹೇಳಿದ್ದಾಗ ಒಪ್ಪಿದ ದೇವಿರವ್ವ ಈಗ ತನ್ನ ಮಗಳ ಮದುವೆಗೆ ಅವುಗಳನ್ನೆಲ್ಲಾ ತರಿಸುತ್ತಾಳೆ ಮತ್ತು ಇದಕ್ಕೆ ಗೌಡರೂ ಯಾವುದೇ ಪ್ರತಿಕ್ರಿಯೆ ನೀಡುವುದಿಲ್ಲ. ಅತ್ಯಂತ ಸಂಪ್ರದಾಯಸ್ಥ ಕುಟುಂಬಗಳೂ ಒತ್ತಡಕ್ಕೆ ಮಣಿದು ಆಧುನಿಕತೆಯನ್ನು ವಸ್ತುರೂಪದಲ್ಲಿ ಒಪ್ಪಿಕೊಳ್ಳುವುದನ್ನು ಸೂಚಿಸುತ್ತದೆ.

ಮರಂಕಿಯಿಂದ ರತ್ನಿಗೆ ಸಾಗಿಬಂದ ಈ ಆಧುನಿಕ ವಸ್ತುಗಳು ನಂತರ ಇಡೀ ಹಳ್ಳಿಯ ಹೆಂಗಸರ ಆಸೆಯನ್ನು ಕೆರಳಿಸುತ್ತದೆ. ಇವರೂ ಸಹ ತಮ್ಮ ಹಿರಿಯರಿಗೆ ಕಾಣದ ಹಾಗೆ ಅವುಗಳನ್ನು ಗೆಂಡೆತಿಮ್ಮನಿಂದ ತರಿಸಿಕೊಳ್ಳಲು ಪ್ರಾರಂಭಿಸುತ್ತಾರೆ. ಅವರು ಸ್ನೋ, ಪೌಡರ್, ಲಂಗ, ಗಂಧದೆಣ್ಣೆ ಮುಂತಾದ ಆಧುನಿಕ ವಸ್ತುಗಳನ್ನು ಬಳಸುತ್ತಾರಾದರೂ ಅವರ ವ್ಯಾಪಾರ ಮಾತ್ರ ಪೂರ್ವದ ದವಸ ಧಾನ್ಯಗಳ ಪದ್ಧತಿ ಮಟ್ಟದಲ್ಲೇ ಇರುತ್ತದೆ. ಗೆಂಡೆತಿಮ್ಮನಿಗೆ ಇದನ್ನೆಲ್ಲಾ ಕಂಡು "ಇದ್ದಕ್ಕಿದ್ದಂತೆ ಗೆಂಡೆತಿಮ್ಮನಿಗೆ ತನ್ನಿಂದ ಮನೆಯವರು ಕಾಣದ ಹಾಗೆ ಏನನ್ನಾದರೂ ತರಿಸಿಕೊಳ್ಳುವ ಹೆಣ್ಣುಮಕ್ಕಳೆಲ್ಲಾ ತನ್ನ ಹೆಂಡತಿ ಮರಂಕಿಯಾಗಿ ಮತ್ತು ಅವರ ಅತ್ತೆಯರೆಲ್ಲಾ ತನ್ನ ಅವ್ವ ಬೇದಿಯಮ್ಮನಾಗಿ ಕಾಣಿಸಿದರು."[೬] ಈ ಹಿರಿಯರ ಬಗ್ಗೆ ಗೆಂಡೆತಿಮ್ಮನಲ್ಲೂ ತಾತ್ಸಾರ ಉಂಟಾಗಿದ್ದು "

ಪಾಪ ಪ್ರಾಯದವರ ಆಸೆ ಮುದಿಗೊಡ್ಡುಗಳಿಗೇನು ಗೊತ್ತಾಗುತ್ತದೆ" ಎಂದುಕೊಂಡಿರುತ್ತಾನೆ. ಈ ಮಾತು ಕೇವಲ ಮನುಷ್ಯರಿಗೆ ಸಂಬಂಧಿಸಿದ್ದಾಗಿರದೇ ಪೂರ್ವದ ಮುದಿಯಾದ ಸಂಪ್ರದಾಯಗಳಿಗೆ ಹೇಳುವ ಮಾತಾಗಿದೆ. ಈ ಹಳೆಯ ಸಂಪ್ರದಾಯಗಳು ಬದಲಾಗಲು ಪ್ರಾಯದ ನವನವೀನ ಆಧುನಿಕ ವಸ್ತುಗಳು ಬೇಕು ಎಂದು ಗೆಂಡೆತಿಮ್ಮ ಅಭಿಪ್ರಾಯಪಡುತ್ತಾನೆ.

ಈ ಕಾದಂಬರಿಯಲ್ಲಿ ಇನ್ನೊಂದು ಮುಖ್ಯವಾದ ಘಟನೆಯೆಂದರೇ ಮರಂಕಿ ಗೌಡರ ಮಗಳು ರತ್ನಿಯ ಮದುವೆಗೆ ಹೋಗದೇ ಉಳಿಯುವುದು. ಎಲ್ಲದರಲ್ಲೂ ಪ್ರತಿಯೊಂದರಲ್ಲೂ ಮರಂಕಿಯು ತನ್ನನ್ನು ಬೇರೆ ರೀತಿಯಲ್ಲಿಯೇ ಗುರ್ತಿಸಿಕೊಳ್ಳುತ್ತಾಳೆ. ಒಂದು ವೇಳೆ ತಾನು ಅವರ ಮದುವೆಗೆ ಹೋದರೆ ಶ್ರೀಮಂತರೂ ಮೇಲ್ಜಾತಿಯವರೂ ಆದ ಗೌಡರು ಕೀಳಾಗಿ ಕಂಡರೆ ಎಂದು ತನ್ನತನವನ್ನು ಸಮರ್ಥಿಸುತ್ತ ಸ್ವಾಭಿಮಾನಿಯಾಗಿಯೂ ಕಂಡುಬರುತ್ತಾಳೆ. ಹಾಗು ಗೆಂಡೆತಿಮ್ಮ ತರುವ ಮದುವೆಯ ಸಿಹಿ ತಿಂಡಿಗಳನ್ನು ಕಿತ್ತೆಸೆಯುತ್ತಾಳೆ. ಇದೂ ಜಮೀನ್ದಾರಿತನವನ್ನು ಪ್ರಶ್ನಿಸುವಂತಿದೆ. ಅವಳ ಯೋಚನೆಗಳೆಲ್ಲಾ ಪ್ರಗತಿಪರವಾದವುಗಳಂತೆ ಕಾದಂಬರಿಯಲ್ಲಿ ಕಂಡುಬರುತ್ತವೆ. 'ಪರಸಂಗದ ಗೆಂಡೆತಿಮ್ಮ' ಕಾದಂಬರಿಯು ಹೆಚ್ಚು ನಾಗರೀಕ ವಸ್ತುಗಳು ಬಂದು ಹಳ್ಳಿಯನ್ನು ಸೇರುವುದರಿಂದ ಉಂಟಾಗುವ ಘರ್ಷಣೆ, ಹಾಸ್ಯ, ಸಂಕಟ, ನೋವು ಮುಂತಾದವುಗಳನ್ನು ಒಳಗೊಂಡಿದ್ದು ಮರಂಕಿಯು ಮತ್ತು ಗೆಂಡೆತಿಮ್ಮ ಇಬ್ಬರೂ ಒಂದು ಹಳ್ಳಿಯು ಪೂರ್ಣವಾಗಿ ಬದಲಾಗಲು ಕಾರಣರಾಗಿ ನಿಲ್ಲುತ್ತಾರೆ. ಇವರಿಬ್ಬರೂ ಈ ಕಾದಂಬರಿಯಲ್ಲಿ ಪ್ರಗತಿಪರರಂತೆ ಕಂಡುಬಂದುದಷ್ಟೆ. ಆದರೆ ಕೊನೆಗೆ ದುರಂತ ಸಾವನ್ನು ಹೊಂದುವುದು ನೋವಿನ ವಿಷಯವಾಗಿದೆ. ನವನಾಗರೀಕತೆಯ ಎಲ್ಲವನ್ನೂ ಅನುಭವಿಸಿ ಮುಂದಿನವರಿಗೆ ಅದರ ಉಪಯೋಗವನ್ನು ತೋರಿಸಿಕೊಟ್ಟಾಗ ಇಡೀ ಊರಿನ ಎಲ್ಲಾ ಮನೆಯಲ್ಲಿಯೂ ಒಬ್ಬೊಬ್ಬ ಮರಂಕಿಯು ಕಂಡುಬಂದಾಗ ಅದರಿಂದುಂಟಾದ ಬದಲಾವಣೆಯ ಸಂಘರ್ಷವು ಶಾಶ್ವತವಾಗಿ ಉಳಿಯುತ್ತದೆ. ಊರಿನವರಿಗೆ ತಮ್ಮ ಮನೆಯ ಬದಲಾವಣೆ ಗೊತ್ತಾಗಿ ಅದಕ್ಕೆ ಕಾರಣ ಗೆಂಡೆತಿಮ್ಮ ಎಂದು ಗೊತ್ತಾದಾಗ ಅವನ ಒಳ್ಳೆತನವನ್ನು ಯಾರೂ ಗುರ್ತಿಸದೇ ಅವನನ್ನು ಮನೆಹಾಳ ಎಂದು ಬೈಯುವುದು ಅವನಿಂದ ಸಹಿಸಲಾಗುವುದಿಲ್ಲ. ಅಂಗಲಾಚಿ ಬೇಡಿಕೊಂಡರೂ ನೂರು ರೂಗಳನ್ನು ದಂಡವಾಗಿ ಹಾಕುತ್ತಾರೆ. ಮಾಲೇಗೌಡರನ್ನು ಆ ನೂರು ರೂಪಾಯಿಗಳಿಗೆ ಜಾಮೀನಾಗಲು ಕೇಳಿಕೊಂಡಾಗ ಅವರೇ ನೂರು ರೂಪಾಯಿ ತೆಗೆದು 'ಜಾಮೀನ್ಯಾಕೋ ತಕೋ ಈಗ್ಲೆ ಬಿಸಾಕು' ಎಂದು ಅವನ ಪರವಾಗಿ ವಾದಿಸುವುದರಿಂದ ಅವರೂ ನವನಾಗರೀಕನಂತೆ ಕಂಡುಬರುತ್ತಾರೆ. ಹಳೆಯ ತಲೆಮಾರಿನವರು ಸಾಗಿಸಿಕೊಂಡು ಬಂದಿದ್ದ ಸಾಂಪ್ರದಾಯಿಕ ಆಚರಣೆಗಳೇ ಮೌಲ್ಯಗಳೆಂದು ತಿಳಿದಿದ್ದರು. ಆದರೆ ಇವೂ ಸಹ ಕೆಲವೊಮ್ಮೆ ಆದರ್ಶಗಳಾಗಿ ನಿಂತುಕೊಳ್ಳದೇ ಬದಲಾಗುತ್ತಿರುತ್ತವೆ. ಯಾವುದನ್ನು ನಾವು ಆದರ್ಶ, ಮೌಲ್ಯ ಎಂದು ಕರೆಯುತ್ತೇವೆಯೋ ಅದು ಮತ್ತೊಂದು ಕಾಲಕ್ಕೆ ಆದರ್ಶವಾಗದೇ ಇರಬಹುದು. ನವೋದಯ ಕಾಲಘಟ್ಟದಲ್ಲಿ ಯಾವುದನ್ನು ನಾವು ಆದರ್ಶ ಎಂದು ಕರೆಯುತ್ತಿದ್ದೆವೋ ಅದು ನವ್ಯದಲ್ಲಿ ಆದರ್ಶವಾಗವುದಿಲ್ಲ. ಹಾಗೆಯೇ ಈ ಕಾದಂಬರಿಯಲ್ಲಿಯೂ ಹಳೆಯ ಸಂಪ್ರದಾಯಗಳನ್ನು ಅಲ್ಲಗಳೆಯುತ್ತಾರೆ ಮತ್ತು ಅವುಗಳನ್ನು ಮೀರಿ ನವೀನ ಕಾಲಕ್ಕೆ ನಡೆಯುತ್ತಾರೆ. ಇದು ನಾಗರಿಕ ಸಮಾಜದಲ್ಲಿ ಕಾಣುವ ಸಹಜ ಬೆಳವಣಿಗೆ ಎಂದು ತೋರುತ್ತದೆ.

ಆಲನಹಳ್ಳಿ ಕಥನಸಾಹಿತ್ಯದಲ್ಲಿ ಒಂದು ಸಂಕ್ರಮಣ ಸ್ಥಿತಿಯು ಚಿತ್ರಿತವಾಗಿರುವುದೇ ವಿಶೇಷವಾಗಿದೆ. ಸಮಾಜದ ಬೆಳವಣಿಗೆ ಮತ್ತು ಸಂಪ್ರದಾಯಗಳ ಪರಿವರ್ತನೆ ಇವುಗಳೆ ಹೆಚ್ಚಾಗಿ ಕಂಡುಬರುತ್ತವೆ. ಹಳ್ಳಿಗಳಲ್ಲಿ ಬದುಕು ನಡೆಸುವಾಗ ಬದಲಾಗುವ ಸಂದರ್ಭ ಬಂದಾಗ ಅಲ್ಲಿ ನಡೆಯುವ ಸಂಘರ್ಷಗಳನ್ನು ನಾವು ನೋಡುತ್ತೇವೆ. ಅಂತಹ ಕಾದಂಬರಿಗಳಲ್ಲಿ 'ಬುಜಂಗಯ್ಯನ ದಶಾವತಾರಗಳು' ಸೇರುತ್ತದೆ. ಇಲ್ಲಿಯೂ ಹಳ್ಳಿಯ ಚಿತ್ರಣದೊಂದಿಗೆ ಕಾದಂಬರಿ ಪ್ರಾರಂಭವಾಗುತ್ತದೆ. ಹಳ್ಳಿಯ ಸಾಂಪ್ರದಾಯಿಕ ಕೃಷಿ ಬದುಕಿನಿಂದ ಪ್ರಾರಂಭವಾಗಿ ವ್ಯಾಪಾರ, ವ್ಯವಹಾರಗಳಂತಹ ಅತೀ ಆಧುನಿಕ ಬದುಕಗಳ ನಡುವೆ ಸಂಘರ್ಷಗಳು ನಡೆಯುತ್ತವೆ. ಇಲ್ಲಿಯೂ ಶೋಷಣೆ,

ಕೇಡು ಸೇಡು, ಕ್ರೌರ್ಯ, ಜಾತೀಯತೆ, ಧರ್ಮದ ಕಟ್ಟುಪಾಡುಗಳು ಕಂಡುಬರುತ್ತವೆ. ಈ ಕಾದಂಬರಿಯ ನಾಯಕಪಾತ್ರ ಬುಜಂಗಯ್ಯನದಾಗಿದ್ದು ಹಳ್ಳಿಯಲ್ಲಿ ಎಲ್ಲರಿಗಿಂತಲೂ ಉತ್ತಮ ಕೃಷಿಕನಾಗಿರುತ್ತಾನೆ. ಈ ಕೃಷಿ ಜೀವನ ಅವನ ಬದುಕಿಗೆ ಸಾಕಾಗದಂತಾಗಿರುತ್ತದೆ. ಚಿಕ್ಕವಯಸ್ಸಿನಲ್ಲಿಯೇ ಹಳ್ಳಿಯನ್ನು ಬಿಟ್ಟು ವ್ಯಾಪಾರ ಕೇಂದ್ರಗಳಾದ ನಗರಗಳ ವ್ಯವಹಾರವನ್ನು ತಿಳಿದಿರುತ್ತಾನೆ. ಆದ್ದರಿಂದ ಅವನ ಮನಸ್ಸು ವ್ಯಾಪಾರ-ವ್ಯವಹಾರದ ಕಡೆಗೆ ತಿರುಗುತ್ತದೆ. ಆದರೇ ಸಂಪ್ರದಾಯವನ್ನೇ ನಂಬಿಕೊಂಡು ಬರುವ ಅವನ ಹೆಂಡತಿ ಮತ್ತು ತಾಯಿಯೇ ಇದನ್ನು ತಡೆದಾಗ "ಮನೆಬಿಟ್ಟು ಈ ಗಳಿಗೆಯಲ್ಲೆ ತೊಲಗು ನಾಯಿ" ಎಂದು ತನ್ನ ಹೆಂಡತಿಯನ್ನು ಬೈಯುತ್ತಾನೆ. ಕೊನೆಗೆ ಮಾವ ಪರ್ವತಪ್ಪನೇ ಬಂದು ತಮ್ಮಂಥ ಮರ್ಯಾದಸ್ತರು ಹೋಟೆಲಿಡುವುದು ಕೀಳು, ಕೀಳು ಜನರು ಕುಡಿದು ತಿಂದ ಲೋಟ ತಟ್ಟೆ ತೊಳೆಯುವುದು ಅಂದರೆ ತಮ್ಮ ಘನತೆ ಗೌರವವೆಲ್ಲ ಮಣ್ಣುಪಾಲಾಗುತ್ತೆ ಎಂದು ಎಚ್ಚರಿಸಿದರು. ಆದರೂ ಕೇಳುವುದಿಲ್ಲ. ಬುಜಂಗಯ್ಯ ಹೋಟೆಲಿನ ಎಲ್ಲವನ್ನೂ ಯೋಚಿಸಿ ವ್ಯವಹಾರಿಕ ಈಡಿಗರ ಅಜ್ಜಪ್ಪನ ಸಹಾಯವನ್ನು ಪಡೆದಿರುತ್ತಾನೆ. ಬುಜಂಗಯ್ಯನ ಅವತಾರಗಳು ಇಲ್ಲಿಂದಲೇ ಪ್ರಾರಂಭವಾಗುವುದು.

ಬುಜಂಗಯ್ಯನ ಹೋಟೆಲ್ ವ್ಯಾಪಾರ ಚೆನ್ನಾಗಿ ಕುದುರಿದ ಮೇಲೆ ಬಳಿಶೆಟ್ಟರು ಮತ್ತು ಅವರ ಮಗಳು ಸುಶೀಲ ಇಬ್ಬರೂ ತಮ್ಮ ವಾಸ್ತವ್ಯವನ್ನು ಗೌಡರ ಹಟ್ಟಿಯಿಂದ ಹೋಟೆಲಿಗೆ ಬದಲಾಯಿಸಿದರು. ಇಲ್ಲಿ ಇವರಿಬ್ಬರಿಗೂ ಪ್ರೇಮ ಉಂಟಾಗಿ ವಯಸ್ಸು ಜಾತಿಗಳ ಬೇಧವಿಲ್ಲದೆ ಅವಳ ಜೊತೆ ಅಂತರ್‌ಜಾತಿ ವಿವಾಹ ಮಾಡಿಕೊಳ್ಳುತ್ತಾನೆ. ಊರಿನಲ್ಲಿ ಹೋಟೆಲ್ ಇಟ್ಟಿದ್ದೇ ಕೆಲವು ಲಿಂಗಾಯತ ಸಂಪ್ರದಾಯವಾದಿಗಳಿಗೆ ಬೇಸರ ಉಂಟುಮಾಡಿರುತ್ತದೆ. ಅಲ್ಲದೆ ಎರಡನೇ ಮದುವೆಯಾಗಿ ಅದೂ ಅಂತರ್‌ಜಾತಿ ವಿವಾಹ ಅವರನ್ನೂ ಇನ್ನೂ ಸಿಟ್ಟಿಗೆಬ್ಬಿಸುತ್ತದೆ. ಅವನ ಹೆಂಡತಿ ತೌರಿಗೆ ಹೋಗುತ್ತಾಳೆ. ತಾಯಿಯು ಅದ್ಯಾವ ಬಿದಿರಾಳ ಚಲುವೆ ಅಂತ ಅವಳ ಕಟ್ಟಿಕೊಂಡು ನಮ್ಮನ್ನೆಲ್ಲಾ ಬಾವಿಗೆ ಎಸೆಯುವ ಅಂತ ಮಾಡಿದ್ದೀಯ ಎಂದು ಬೈಯುತ್ತಾಳೆ. ಪಾರ್ವತಿಯ ತಂದೆ ಅಷ್ಟಕ್ಕೆ ಬಿಡದೆ ಮಾದಳ್ಳಿಯಲ್ಲಿ ಪಂಚಾಯ್ತಿ ಸೇರಿಸುತ್ತಾನೆ. ಇಲ್ಲಿನ ಪಂಚಾಯ್ತಿ ಮುಖಂಡರು "ನೋಡು ಬುಜಂಗಯ್ಯ ಬೆಳಗಾನ ಮಾತಾಡದ್ರು ಅಷ್ಟೆ ಮಾತು. ಕಡೇ ಮಾತಿಷ್ಟೆ ಏನೋ ಆಗೋದು ಆಗೋಯ್ತು. ನಮ್ಮ ಕುಲಕ್ಕೆ ಮಸಿಬಳ್ದಂಗೆ. ಅವಳ್ಯಾವ ಸುಡುಗಾಡು ಜಾತಿಯವ್ಳೊ, ಕೂಡ್ಕಂಡೆ, ಕುಲದ ಸಭೆ ಅಂದ್ರೆ ದೇವರಿದ್ದಂಗೆ ಅವರೆಲ್ಲ ಕೈ ಮುಗ್ದು ತಪ್ಪಾಯ್ತು ಅಂದ್ಬುಟ್ಟು, ನಾಳಕ್ಕೆ ಪೊತ್ತು ಮುಳ್ಗೋದ್ರಲ್ಲಿ ಅವಳ ಬಿಟ್ಬುಡ್ತೀನಿ ಅಂತ ಹೇಳು, ಇಲ್ಲಾಂದ್ರೆ ಮುಂದೇನ್ಮಾಡ್ಬೇಕೊ ಮಾಡ್ತೀವಿ"[೭] ಎನ್ನುತ್ತಾರೆ. ಇದಕ್ಕೆ ಪ್ರತಿಯಾಗಿ "ನೀವು ಯೇಳ್ದಂಗೆ ಕೇಳಾಕೆ ನಾನು ಅಡ್ನಾಡಿ ಮಗ ಅಲ್ಲ, ಅದೇನ್ ತರ್‍ಕೊತ್ತೀರೋ ತರ್‍ಕೊಳ್ಳಿ"[೮] ಎಂದು ಅವರ ವಿರುದ್ಧ ಕಿಡಿಕಾರಿದಾಗ ಇವರ ನಡುವೆ ಹೊಡೆದಾಟ ಶುರುವಾಗುತ್ತದೆ. ಈ ಗಲಾಟೆಯಲ್ಲಿ ಬುಜಂಗಯ್ಯನಿಗೆ ತದುಕುತ್ತಾರೆ. ಇದರಿಂದ ಮೊದಲಿನಿಂದ ಕುಗ್ರಾಮಗಳಾದ ಹಳ್ಳಿಗಳಲ್ಲಿ ಪಂಚಾಯ್ತಿಗಳೇ ಪ್ರಮುಖವಾಗಿದ್ದು ಈ ಒಂದು ಪದ್ಧತಿಯು ಮುರಿದುಬಿದ್ದಂತಾಗಿ ಈ ಗ್ರಾಮಕ್ಕೆ ಪೋಲೀಸರ ಆಗಮನವಾಗುತ್ತದೆ. ಮತ್ತೆ ಅದೇ ಸಂಪ್ರದಾಯವಾದಿಗಳು ಪೊಲೀಸರನ್ನು ಎದುರಿಸಲು, ಅದಕ್ಕಾಗುವ ಖರ್ಚು ಬರಿಸಲು 'ವರಿ' ಎತ್ತುವ ಮಾತಾಡುತ್ತಾರೆ. ಆದರೆ ಈ ವರಿ ಎತ್ತುವ ಬಗ್ಗೆ ಯಾರಲ್ಲೂ ಸಮ್ಮತವಿರುವುದಿಲ್ಲ. ಇದರಿಂದ ದಿಗಿಲುಗೊಂಡ ರುದ್ರಪ್ಪ ಮತ್ತು ಅವನ ಹಿಂಬಾಲಕರು ಸಹಜವಾಗಿಯೇ ರಾಜಿ ಅಥವಾ ಸಂಧಾನಕ್ಕೆ ಗಮನಹರಿಸುತ್ತಾರೆ. ಕೊನೆಗೆ ಮಠದ ಸ್ವಾಮಿಗಳ ಎದುರೇ ರಾಜಿಯಾಗುತ್ತದೆ. ಹಾಗು ಸುಶೀಲೆ ದೊಡ್ಡ ಮಠದ ಸ್ವಾಮಿಗಳಿಂದಲೇ ಲಿಂಗಧಾರಣೆ ಮಾಡಿಸಿಕೊಂಡು ಶಿವಪೂಜೆಯಲ್ಲಿ ತೊಡಗುತ್ತಾಳೆ. ಹಾಗು ಬುಜಂಗಯ್ಯ ಬಸವಣ್ಣನವರ ವಿಚಾರಗಳಿಂದ ಪ್ರಭಾವಿತನಾಗುತ್ತಾನೆ.

ಬುಜಂಗಯ್ಯನ ಹೋಟೆಲ್ ವ್ಯವಹಾರಕ್ಕೆ ಬೆಂಕಿಬಿದ್ದ ಮೇಲೆ ಅವನು ಕೊಂಡುಕೊಂಡಿದ್ದ ಜಮೀನಿನ ವ್ಯವಸಾಯಕ್ಕೆ ನಿಲ್ಲುತ್ತಾನೆ. ಅದೂ ಯಾಕೋ ಸರಿಯಾಗಿ ಕಾಣದೆ ಮತ್ತೇ ವ್ಯಾಪಾರಕ್ಕೆ ಮನಸ್ಸುಮಾಡುತ್ತಾನೆ.

ಗೌಡರ ಮನೆಯ ಪಕ್ಕದಲ್ಲಿಯೇ ಒಂದು ಅಂಗಡಿಮನೆಯನ್ನು ಮಾಡಿಕೊಂಡು ದಿನಸಿವ್ಯಾಪಾರವನ್ನು ಮಾಡುತ್ತಾನೆ. ಇದರಲ್ಲಿಯೂ ಇವನಿಗೆ ಸ್ಪರ್ಧೆ ಇದ್ದೇ ಇರುತ್ತದೆ. ಈ ಅಂಗಡಿಯನ್ನು ಮುಂದುವರೆಸಿಕೊಂಡು ಹೋಗಲು ಸಾಧ್ಯವಾಗುವುದಿಲ್ಲ. ಪ್ರ ತಿದಿನ ಪತ್ರಿಕೆ ಓದುವ ಬುಜಂಗಯ್ಯನು ತನ್ನ ಹೊಲಕ್ಕೆ ಬಾವಿ ತೆಗೆಯುವ ಯೋಜನೆಯನ್ನು ಹಾಕಿಕೊಳ್ಳುತ್ತಾನೆ. ಮತ್ತು ಅದಕ್ಕೆ ಬೇಕಾಗುವ ಹಣವನ್ನು ಸಾಲದ ಮೂಲಕ ಬ್ಯಾಂಕಿನಿಂದ ಪಡೆಯಲು ಇಚ್ಛಿಸಿ ತನ್ನ ಹಿಂದಿನ ಬೇಸಾಯ ಪದ್ಧತಿಗೆ ಭಿನ್ನವಾದ ಬೇಸಾಯ ಬೆಳೆಗಳನ್ನು ಬೆಳೆಯಲು ಯೋಜನೆಯನ್ನು ಮಾಡುತ್ತಾನೆ. ತನ್ನ ಪೂರ್ವಜರು ಸಂಪಾದಿಸಿದ ಎಲ್ಲಾ ಜಮೀನನ್ನು ತನ್ನ ಹೆಂಡತಿಗೆ ಬಿಟ್ಟುಕೊಟ್ಟಿರುತ್ತಾನೆ. ತಾನೇ ಕೊಂಡುಕೊಂಡ ಜಮೀನಿನಲ್ಲಿ ಬಾವಿ ತೆಗೆಸುವ ಯೋಜನೆ ಬುಜಂಗಯ್ಯನ ಪ್ರಗತಿಶೀಲತೆಯನ್ನೇ ಸೂಚಿಸುತ್ತದೆ. ಬ್ಯಾಂಕಿನಿಂದ ಸಾಲ ತೆಗೆದು ಬಾವಿ ತೆಗೆಸಿ ನೀರು ಸಿಕ್ಕ ನಂತರ ಇಡೀ ಊರಿಗೇ ಬುಜಂಗಯ್ಯ ನಿಜವಾದ ಗಂಡಸಾಗಿ ಕಂಡುಬರುತ್ತಾನೆ. ಊರಿನಲ್ಲಿ ಮತ್ತೇ ಇನ್ನಷ್ಟು ಗೌರವ ಮರ್ಯಾದೆಗಳು ಲಭ್ಯವಾಗತೊಡಗುತ್ತವೆ. ಆಗ ಅವನ ಪೂರ್ವದ ಅಂಗಡಿ ವ್ಯಾಪಾರವನ್ನು ನಿಲ್ಲಿಸುತ್ತಾನೆ. ತನ್ನ ಜಮೀನಿನಲ್ಲಿ ತೋಟಕಟ್ಟಬೇಕೆಂದು ಇವನ ಮನಸ್ಸು ವಾಣಿಜ್ಯಬೆಳೆಗಳ ಕಡೆಗೆ ಆಸಕ್ತಿ ಹೊಂದಿ ತಿಪಟೂರು ಮತ್ತು ತಮಿಳುನಾಡಿನಿಂದ ತೆಂಗಿನಕಾಯಿ ತರಿಸಿ ಹಾಕಿಸಬೇಕೆಂದು ಯೋಚಿಸುತ್ತಾನೆ. ತನ್ನ ವಂಶದಲ್ಲಿ ತನ್ನ ಊರಿನಲ್ಲಿ ಅವನೊಬ್ಬನೇ ನೀರಾವರಿ ಬೆಳೆಗಳನ್ನು ಬೆಳೆಯುವುದನ್ನು ಕಂಡು ರುದ್ರಪ್ಪನಂತಹವರು ಕೇಡಿನ ಮಾತನಾಡುತ್ತಾರೆ. ಬುಜಂಗಯ್ಯ ಡಿಸೆಲ್ ಮಿಷನ್ ತಂದು ನೀರೆತ್ತುವಾಗ ಇಡೀ ಊರಿನ ಜನರು ಅದನ್ನು ಹೊಸದೊಂದು ಅದ್ಭುತವೆಂಬಂತೆ ನೋಡಿರುತ್ತಾರೆ. ಇದು ಆ ಇಡೀ ಮಳೆಯಾಶ್ರಿತ ಜಮೀನಿಗೇ ಹೊಸದಾಗಿ ಮಾಡುತ್ತಿರುವ ಕ್ರಾಂತಿಯ ನಾಂದಿಯಂತೆ ಚಿತ್ರಿತವಾಗಿದೆ. ಆದ್ದರಿಂದಲೇ ಬುಜಂಗಯ್ಯನ ನಂತರದಲ್ಲಿ ಆ ಊರಿನ ಹಲವು ಜನರು ಮತ್ತು ಅಕ್ಕಪಕ್ಕದ ಊರಿನ ಜನರು ಬುಜಂಗಯ್ಯನಂತೆಯೇ ಬಾವಿತೆಗೆಸಲು ಯೋಚಿಸಿ ಅವನಿಂದ ಮಾರ್ಗದರ್ಶನ ಪಡೆಯಲು ಬರುತ್ತಾರೆ. ಅದರಿಂದ ಬುಜಂಗಯ್ಯನಿಗೆ ಇನ್ನೊಂದು ವೃತ್ತಿ ಸಿಕ್ಕಂತಾಗಿ ತನ್ನ ಮಾರ್ಗದರ್ಶನಕ್ಕೆ ಬಂದ ಜನರಿಗೆಲ್ಲಾ ಅವನು ಮುಂದೆ ನಿಂತು ಸರ್ಕಾರದಿಂದ ಸಾಲ ತೆಗೆಸಿಕೊಟ್ಟಾಗ ಬುಜಂಗಯ್ಯನನ್ನೇ ಬಾವಿತೆಗೆಸಿಕೊಡಲು ಕೇಳಿಕೊಳ್ಳುವುದರಿಂದ ಅದರ ಉಸ್ತುವಾರಿಯನ್ನು ಬುಜಂಗಯ್ಯನೇ ವಹಿಸಿಕೊಳ್ಳುತ್ತಾನೆ. ಇದರಿಂದ ಅವನಿಗೆ ಇನ್ನೊಂದು ಆಧುನಿಕ ವೃತ್ತಿಯು ಸಿಕ್ಕಂತಾಗುತ್ತದೆ. ಆಗ ಕೃಷಿಯ ಕಡೆ ತನ್ನ ಗಮನಕೊಡುವುದನ್ನೆ ಕಡಿಮೆಮಾಡಿ ತಮಿಳುನಾಡಿನಿಂದ ಒಂದು ಕುಟುಂಬವನ್ನು ತಂದು ತನ್ನ ತೋಟದಲ್ಲಿ ಉಳಿಯುವಂತೆ ಮಾಡುತ್ತಾನೆ. ಇದರಿಂದಾಗಿ ಸರ್ಕಾರದಿಂದ ಕೆರೆ ರಿಪೇರಿ, ದಾರಿ ರಿಪೇರಿಯ ಹಲವು ಕಾಂಟ್ರಾಕ್ಟುಗಳನ್ನು ಮಾಡಲು ಅನುಕೂಲವಾಗುತ್ತದೆ. ಹಾಗೇ ಅತ್ಯಂತ ಮುತುವರ್ಜಿಯಿಂದ ಇವುಗಳನ್ನು ಮುಗಿಸಿಕೊಡುತ್ತಾ ಬರುತ್ತಾನೆ. ಇದೆಲ್ಲವನ್ನು ಗಮನಿಸಿದಾಗ ಬುಜಂಗಯ್ಯ ಅವನ ಮನೆತನದ ಹಿರಿಯರು ಅಥವಾ ಆ ಊರಿನಲ್ಲಿಯೇ ಬದುಕುತ್ತಿರುವ ಹಿರಿಯ ತಲೆಮಾರಿನ ಜನಗಳಿಗಿಂತಲೂ ಅತ್ಯಂತ ಮುಂದುವರೆದ ವ್ಯಕ್ತಿಯಂತೆ ಕಂಡುಬರುತ್ತಾನೆ. ಸಿಕ್ಕ ಅವಕಾಶಗಳನ್ನು ಸಮರ್ಪಕವಾಗಿ ಬಳಸಿಕೊಂಡು ಮುಂದುವರಿಯುವ ಹಾಗು ತನ್ನ ದುರ್ಬಲ ಸ್ಥಿತಿಯನ್ನು ಸುಧಾರಿಸಿಕೊಳ್ಳುವ ವ್ಯಕ್ತಿಗಳು ಆದರ್ಶವಾಗಿ ನಿಲ್ಲುತ್ತಾರೆ. ಇವರ ಈ ಆದರ್ಶಗಳು ಮುಂದಿನ ಪೀಳಿಗೆಗೆ ಮಾರ್ಗದರ್ಶಕವಾಗಬಹುದು. ಅಂತಹ ಹಲವು ವ್ಯಕ್ತಿಗಳನ್ನು ಈ ಸಮಾಜದಲ್ಲಿಯೇ ನೋಡಬಹುದು. ಗಾಂಧೀಜಿ, ಅಂಬೇಡ್ಕರ್, ವಿಶ್ವೇಶ್ವರಯ್ಯ ಮುಂತಾದವರು ಮೊದಲಿದ್ದ ಸ್ಥಿತಿಯಿಂದ ತಮಗೆ ಸಿಕ್ಕಂತಹ ಅನುಕೂಲಗಳನ್ನು ಬಳಸಿಕೊಂಡು ಉನ್ನತ ಸ್ಥಿತಿಗೆ ಏರಿದ್ದಾರೆ. ಇವರ್ಯಾರೂ ಸ್ವ ಪ್ರತಿಷ್ಠೆಗಾಗಿ ಚಿಂತಿಸಿದವರಲ್ಲ. ಬದಲಾಗಿ ಆಧುನಿಕ ಅವಕಾಶಗಳನ್ನು ಸಮರ್ಪಕವಾಗಿ ಬಳಸಿಕೊಂಡು ತಮ್ಮ ಸಮಾಜವನ್ನು ಈ ದೇಶವನ್ನು ಉತ್ತಮ ದಾರಿಗೆ ಕೊಂಡೊಯ್ದ ಮಹನೀಯರಾಗಿದ್ದಾರೆ.

ಬುಜಂಗಯ್ಯನ ದಶಾವತಾರಗಳಲ್ಲಿ ಬರುವ ಸುಶೀಲಳೂ ಸಹ ಸುಶಿಕ್ಷಿತ, ಆಧುನಿಕ ಸ್ತ್ರೀಯಂತೆಯೇ ಚಿತ್ರಿತವಾಗಿದ್ದಾಳೆ. ತನಗೆ ಇಷ್ಟವಾದವನನ್ನೇ ಪ್ರೀತಿಸಿ ಮದುವೆಯಾಗುವುದು ಅವರ ಶೆಟ್ಟರ ಜಾತಿಯ ಆಚಾರಗಳನ್ನು

ಪಾಲಿಸದೇ ಬುಜಂಗಯ್ಯನ ಸಂಸ್ಕೃತಿಗೆ ಹೊಂದಿಕೊಳ್ಳುವುದು ಕಂಡುಬರುತ್ತದೆ. ಬುಜಂಗಯ್ಯನೊಂದಿಗೆ ಸಂಸಾರ ನಡೆಸುವಾಗ ಪ್ರತಿದಿನ ಬೆಳಿಗ್ಗೆ ತಿಂಡಿ ಮಾಡುವುದು, ಹೊಸ ಮನೆ ಕಟ್ಟಿಸಬೇಕಾದರೆ ಕಕ್ಕಸ್ಸು ಕಟ್ಟಿಸಲೇಬೇಕೆಂದು ಹೇಳುವುದು ಅವಳ ಆಧುನಿಕ ಬುದ್ಧಿಯನ್ನೆ ಸೂಚಿಸುತ್ತದೆ. ಇಲ್ಲಿ ಚಿತ್ರಣಗೊಂಡಿರುವ ರಾಜುವಿನ ಪಾತ್ರವು ಕಿಟ್ಟಿಯ ಪಾತ್ರದ ಹೋಲಿಕೆ ಹೊಂದಿದ್ದು ಮೈಸೂರಿಗೆ ಬಂದು ಶಿಕ್ಷಣ ಪಡೆದ ನಂತರ ಊರಿನ ಹಲವು ವಿಷಯಗಳನ್ನು, ಬುಜಂಗಯ್ಯನಿಗೆ ಕೆಲವು ಸಲಹೆಗಳನ್ನು ನೀಡುವುದೇ ಸೂಚಿಸುತ್ತದೆ. ಇಡೀ ಊರಿಗೆ ಕಾಲರ ಬಂದಿದ್ದಾಗ ಬುಜಂಗಯ್ಯ ಮತ್ತು ಸುಶೀಲ ಇಬ್ಬರೂ ಮೈಸೂರಿಗೆ ಬಂದಿದ್ದಾಗ ರಾಜುವಿನ ಸಲಹೆಯಂತೆ ಇಂಜಕ್ಷನ್ ಮಾಡಿಸಿಕೊಂಡೇ ಹೋಗುತ್ತಾರೆ. ತಂಬೂರಿ ಅಯ್ನೋರು ಸಾಂಪ್ರದಾಯವಾದಿಯಂತೆ ಕಂಡುಬಂದು ಮೊದಲು ಸುಶೀಲಳಿಂದ ಒಂದು ಕಪ್ಪು ನೀರನ್ನೂ ಕುಡಿಯದವರು ಅವಳ ಮಾತು, ನಡವಳಿಕೆ, ಸ್ವಚ್ಛತೆಯನ್ನು, ಅವಳು ಓದು ಬರಹ ಬಲ್ಲವಳಾಗಿದ್ದು ಅವಳ ಒಳ್ಳೆಯತನವನ್ನು ಗುರ್ತಿಸಿ ಅವಳು ಮಾಡಿದ ಊಟವನ್ನೇ ಉಣ್ಣಲು ಶುರುಮಾಡುತ್ತಾರೆ. ಹಳ್ಳಿಯಲ್ಲಿ ಈ ರೀತಿಯ ಬದಲಾವಣೆ ಸಾಧ್ಯವಾಗುತ್ತಿರುವಂತೆ 'ತೊರೆ' ಕತೆಯಲ್ಲಿ ಬರುವ ಪ್ರಭುವು ನಗರದಿಂದ ಅಪರೂಪಕ್ಕೆ ಊರಿಗೆ ಬಂದಾಗ ಅತ್ಯಂತ ಬೇಸರವನ್ನು ವ್ಯಕ್ತಪಡಿಸುತ್ತಾನೆ. ಅವನಾಗಲೇ ನಗರಜೀವನಕ್ಕೆ ಒಗ್ಗಿಕೊಂಡಿದ್ದರಿಂದ ಹಳ್ಳಿಗಳಲ್ಲಿ ಈ ರೀತಿಯ ಬದುಕಿಗೆ ಅವಕಾಶವಿಲ್ಲವೆಂದು ತಿಳಿದು "ಹುಟ್ಟಿಬೆಳೆದ ಊರೆ ತನಗೆ ಬೇಡ, ಇಲ್ಲಿಯ ಬದುಕು, ಅವರ ಆಚಾರಗಳು, ಮೂಢನಂಬಿಕೆಗಳು... ಛೆ ಪಾಪ ಅನ್ನಿಸುತ್ತೆ. ಇದ್ದಂತೆ ಇರುವುದರಲ್ಲೆ ಇವರ ಬದುಕು ಪೂರ್ಣ. ಇವರಿಗೆ ಯಾವ ವಿಕಾಸವೂ ಬೇಡ, ಇವರ ದೇಹದ ಅಂಗುಲಂಗುಲಕ್ಕೂ ತಲೆ ತಲಾಂತರದ ಕೆಟ್ಟ ಸಂಸ್ಕಾರ ಬೇರು ಬಿಟ್ಟಿದೆ. ಕಿತ್ತೊಗೆಯಲು ಸಾಧ್ಯವೇ ಇಲ್ಲದಂತೆ"[6] ಎಂದು ಹಳ್ಳಿಯ ಸಮಸ್ತ ಆಚಾರಗಳನ್ನೂ ಅಲ್ಲಗಳೆಯುತ್ತಾನೆ. ಶಿಕ್ಷಣ ಮನುಷ್ಯನ ವಿಕಾಸಕ್ಕೆ ಸಾಧ್ಯವಾಗುವ ಸಾಧನವಾದ್ದರಿಂದ ಪ್ರಜ್ಞಾವಂತರು ಸದಾ ಬದಲಾವಣೆಯನ್ನೇ ಬಯಸುತ್ತಿರುತ್ತಾರೆ ಎಂಬುದನ್ನು ಆಲನಹಳ್ಳಿ ಅವರು ಚಿತ್ರಿಸಿದ್ದಾರೆ.

## ಅಡಿ ಟಿಪ್ಪಣಿಗಳು

೧. ಶ್ರೀಕೃಷ್ಣ ಆಲನಹಳ್ಳಿ, ಗೋಡೆ, ಪು. ೮೧

೨. ಶ್ರೀಕೃಷ್ಣ ಆಲನಹಳ್ಳಿ, ಗೋಡೆ, ಪು. ೧೫

೩. ಶ್ರೀಕೃಷ್ಣ ಆಲನಹಳ್ಳಿ, ಆಲನಹಳ್ಳಿ ಸಮಗ್ರ ಕಥೆಗಳು, ಪು. ೯೨

೪. ಶ್ರೀಕೃಷ್ಣ ಆಲನಹಳ್ಳಿ, ಆಲನಹಳ್ಳಿ ಸಮಗ್ರ ಕಥೆಗಳು, ಪು. ೫೪

೫. ಶ್ರೀಕೃಷ್ಣ ಆಲನಹಳ್ಳಿ, ಆಲನಹಳ್ಳಿ ಸಮಗ್ರ ಕಥೆಗಳು, ಪು. ೫೫

೬. ಶ್ರೀಕೃಷ್ಣ ಆಲನಹಳ್ಳಿ, ಪರಸಂಗದ ಗೆಂಡೆ ತಿಮ್ಮ, ಪು. ೧೦೮

೭. ಶ್ರೀಕೃಷ್ಣ ಆಲನಹಳ್ಳಿ, ಭುಜಂಗಯ್ಯನ ದಶಾವತಾರಗಳು, ಪು. ೨೬೧

೮. ಶ್ರೀಕೃಷ್ಣ ಆಲನಹಳ್ಳಿ, ಭುಜಂಗಯ್ಯನ ದಶಾವತಾರಗಳು, ಪು. ೨೬೩

೯. ಶ್ರೀಕೃಷ್ಣ ಆಲನಹಳ್ಳಿ, ಆಲನಹಳ್ಳಿ ಸಮಗ್ರ ಕಥೆಗಳು, ಪು. ೨೨

## ಅಧ್ಯಾಯ ನಾಲ್ಕು

# ಕೌಟುಂಬಿಕ ಸಂಘರ್ಷಗಳು

ದೊಡ್ಡ ಮನೆತನದಲ್ಲಿ ಹುಟ್ಟಿಬೆಳೆದ ಚಂದ್ರೇಗೌಡ ಊರಿನ ಗಣ್ಯವ್ಯಕ್ತಿಯಾಗಿ ಕಂಡುಬರುತ್ತಾನೆ. ಅವನ ಹೆಂಡತಿಯಾದ ಕಮಲಮ್ಮ ಮದುವೆಯಾಗಿ ಹಲವು ವರ್ಷಗಳಾದರೂ ಮಕ್ಕಳಾಗಿರುವುದಿಲ್ಲ. ಅದರಿಂದ ಚಂದ್ರೇಗೌಡ ಕಮಲಮ್ಮನ ಅಣ್ಣನ ಮಗ ಕಿಟ್ಟಿಯನ್ನು ಮನೆಯಲ್ಲಿ ಸಾಕಿಕೊಂಡಿರುತ್ತಾನೆ. ಇವರಿಬ್ಬರ ನಡುವೆ ಸಾಮರಸ್ಯವಿರದೆ ಕಮಲಮ್ಮಳನ್ನು ಬೈದು ಹೊಡೆದು ಹಿಂಸಿಸುವ ಪ್ರವೃತ್ತಿಯವನಾಗಿರುತ್ತಾನೆ. ಹೊಸೂರಿನ ಬಸಕ್ಕನೊಂದಿಗೆ ಇವನು ಸಂಬಂಧವನ್ನು ಹೊಂದಿರುತ್ತಾನೆ. ಕಮಲಮ್ಮ ಇದಾವುದನ್ನೂ ನೇರವಾಗಿ ಪ್ರತಿಭಟಿಸದೆ ಮೌನವಾಗಿಯೇ ಕಣ್ಣೀರಿಡುತ್ತಾಳೆ. ತನ್ನ ಗಂಡನೊಂದಿಗೆ ಇತರರಂತೆ ಜಗಳಕ್ಕಿಳಿಯದೇ ಎಲ್ಲವನ್ನೂ ಸಹಿಸಿಕೊಳ್ಳುತ್ತಾಳೆ. ಬುಜಂಗಯ್ಯನ ಹೆಂಡತಿ ಪಾರ್ವತಿ ಕಮಲಮ್ಮಳಂತೆ ವಿನಯದಿಂದ ಇರದೆ ತನ್ನ ಗಂಡನೊಂದಿಗೆ ಸಂಘರ್ಷಕ್ಕಿಳಿಯುತ್ತಾಳೆ. ಅಷ್ಟೇ ಅಲ್ಲದೆ ವಿನಯದಿಂದ ಇರದೆ ತನ್ನ ಗಂಡ ಎರಡನೇ ಮದುವೆಯಾದನೆಂದು ತಿಳಿದು ಅವನೊಂದಿಗೆ ಸಂಸಾರ ಮಾಡಲು ನಿರಾಕರಿಸುತ್ತಾಳೆ. ಇಡೀ ಊರಿಗೆ ಗೊತ್ತಾಗುವಂತೆ ಜಗಳ ಮಾಡಿ ಅವನಿಂದ ಬೇರೆಯಾಗಿ ಜೀವನ ಮಾಡಲು ಇಷ್ಟಪಡುತ್ತಾಳೆ. ಆದರೆ ಕಮಲಮ್ಮ ತನ್ನ ಗಂಡ ಹೊಡೆದರೂ ಅವನೊಂದಿಗೇ ಸಹಜೀವನ ಮಾಡುತ್ತಾಳೆ. ಈಕೆಗೆ ಗಂಡನ ಮರ್ಯಾದೆ, ಮನೆತನದ ಗೌರವವೇ ಮುಖ್ಯವಾಗುತ್ತದೆ. ಮತ್ತು ತನ್ನ ಗಂಡನ ಸಂತೋಷವೇ ಮುಖ್ಯ ಎಂದು ನಂಬಿದ ಹೆಣ್ಣಾಗಿರುತ್ತಾಳೆ. ಆದ್ದರಿಂದ ಹೊಸೂರಿನ ಬಸಕ್ಕನ ಮನೆಗೆ ಹೋದಾಗ ಕಿಟ್ಟಿ "ಇವರೇನಾಗಬೇಕು" ಎಂದು ಕೇಳಿದಾಗ 'ನಿನ್ನ ಅತ್ತೆ ಕಣೋ' ಎಂದು ಹೇಳುವುದು ಅವಳ ಔದಾರ್ಯವನ್ನು ಸೂಚಿಸುತ್ತದೆ. ಈ ಇಬ್ಬರು ಸ್ತ್ರೀಯರ ಮನಸ್ಥಿತಿಗೆ ಕಾರಣ ಇಬ್ಬರ ಮನೋಧರ್ಮ ಭಿನ್ನವಾದಂತಹದ್ದು. ಇದು ಅವರ ಕುಟುಂಬದ ಹಿನ್ನೆಲೆಯನ್ನೂ ಸೂಚಿಸುತ್ತದೆ. ಗಂಡನಿಂದ ಎಷ್ಟೇ ನೋವಾದರೂ ಕಮಲಮ್ಮ ತನ್ನ ತವರಿಗೆ ಮಾತ್ರ ಹೋಗುವುದಿಲ್ಲ. ಆದರೆ ಪಾರ್ವತಿ ತೌರುಮನೆಯಲ್ಲಿದ್ದಾಗ ಬುಜಂಗಯ್ಯ ಅವಳನ್ನು ಕರೆತರಲು ಹೋದಾಗ ತನ್ನ ತೌರುಮನೆಯ ಎಲ್ಲರೂ ಸೇರಿ ಬುಜಂಗಯ್ಯನನ್ನು ಹೊಡೆಯುತ್ತಾರೆ. ಪಾರ್ವತಿಯ ತಂಗಿ ಬುಜಂಗಯ್ಯನ ಕೈಯನ್ನೂ ಕಚ್ಚಿಬಿಡುತ್ತಾಳೆ. ಇದರಿಂದಲೇ ಪಾರ್ವತಿ ಮತ್ತು ಅವಳ ತೌರಿನವರ ಕ್ರೌರ್ಯವು ಅರ್ಥವಾಗುತ್ತದೆ. ಈ ಸಂಘರ್ಷಕ್ಕಿಂತಲೂ ಭಿನ್ನವಾದದ್ದು 'ಹುತ್ತ' ಕತೆಯಲ್ಲಿ ಬರುವ ಸುಮಿತ್ರಳ ತಾಯಿಯದಾಗಿರುತ್ತದೆ. ಯಾವುದೋ ಕಾರಣಕ್ಕಾಗಿ ಸುಮಿತ್ರಳ ತಾಯಿ ಗಂಡನೊಂದಿಗೆ ಬೇರೆಯಾಗಿ ಅವನಿಂದ ಪಾಲನ್ನು ಪಡೆದು ನಗರದಲ್ಲಿ ಜೀವನ ಸಾಗಿಸುತ್ತಿರುತ್ತಾಳೆ. ಹಳ್ಳಿಯ ಬದುಕನ್ನು ಇಷ್ಟಪಡದೇ ತನ್ನ ಗಂಡನನ್ನ ಬಿಟ್ಟು ಎಷ್ಟೋ ವರ್ಷಗಳಾಗಿರುತ್ತವೆ. ಇವಳ ಮಗ ಇವರಿಂದ ಬೇರೆಯಾಗಿ ಪೋಲಿಯಾಗಿ ವ್ಯಾಪಾರ ಮಾಡುತ್ತೇನೆಂದು ಮುಂಬಯಿಗೆ ಹೋಗಿರುತ್ತಾನೆ. ಈ ಕುಟುಂಬದಲ್ಲಿ ಸುಮಿತ್ರಳ ತಾಯಿಗೆ ಒಂಟಿತನ ಕಾಡುತ್ತದೆ. ಇದಕ್ಕೆ ಇವಳ ಮನಸ್ಥಿತಿಯೇ ಪ್ರಮುಖ

ಕಾರಣವೆಂಬುದಾಗಿ ತಿಳಿಯುತ್ತದೆ. ಯಾರನ್ನೂ ಪೂರ್ತಿಯಾಗಿ ಹೊಂದಿಕೊಳ್ಳದವಳಾಗಿರುತ್ತಾಳೆ. ಇವಳಿಗೆ ಯಾವುದೇ ಅತ್ತೆ, ಮಾವನ ಒತ್ತಡಗಳು ಇರುವುದಿಲ್ಲ. ಹಿರಿಯರು ಯಾರಾದರೂ ಸರಿಯಾಗಿ ತಿಳುವಳಿಕೆ ನೀಡದೆ ಇರುವುದೇ ಇಲ್ಲಿನ ಕೊರತೆಯಂತೆ ಕಂಡುಬರುತ್ತದೆ. ಎಷ್ಟೋ ವೇಳೆ ಮನೆಯಲ್ಲಿರುವ ಹಿರಿಯರೇ ಕುಟುಂಬದಲ್ಲಿನ ಜಗಳಕ್ಕೆ ಕಾರಣವಾಗುವುದನ್ನು ನೋಡಬಹುದು. ಅಂತಹದ್ದು 'ಗೋಡೆ' ಕಾದಂಬರಿಯ ದೊಡ್ಡಮನೆಯಲ್ಲಿ ಕಂಡುಬರುತ್ತದೆ. ಈ ದೊಡ್ಡ ಮನೆಯ ಚಿಕ್ಕಸೊಸೆ ಚಿನ್ನಮ್ಮ ಮನೆ ಪಾಲಾಗಬೇಕೆಂದು ಹಠ ಹಿಡಿದು ನಿಲ್ಲುತ್ತಾಳೆ. ಊರಿನ ಗೌರವಂತ ದೊಡ್ಡಮನೆಯ ಸೊಸೆಯಾಗಿ, ಹಳ್ಳಿಯ ಹೆಣ್ಣುಮಗಳು ಬಯಸುವ ಅವಿಭಕ್ತ ಕುಟುಂಬವನ್ನು ಬಯಸದೆ ಇದು ಪಾಲಾಗಬೇಕೆನ್ನುತ್ತಾಳೆ. ತಾಯವ್ವ ಹಿರಿಯ ಸೊಸೆಯಾಗಿ ಬಂದು ಆ ಮನೆಗಾಗಿ ದುಡಿದಿರುತ್ತಾಳೆ. ಚಿನ್ನಮ್ಮ ಅವಳ ಮೇಲೆ ಇಲ್ಲದ ಆರೋಪ ಹೊರಿಸುತ್ತಾಳೆ. ಮನೆ ಪಾಲಾಗುವಂತೆ ಮಾಡುತ್ತಾಳೆ. ಇದು ಅವಳ ಸಣ್ಣತನವನ್ನೇ ಎತ್ತಿತೋರಿಸುತ್ತದೆ. ಚಿನ್ನವ್ವನ ಗಂಡ ಮಾಸ್ತಿಗೌಡ ಇದನ್ನು ಒಪ್ಪುವುದಿಲ್ಲವಾದರೂ ಮುಂದಿನ ಅನಾಹುತಗಳನ್ನು ಅರಿತು ಮನಸ್ಸಿಲ್ಲದೇ ಒಪ್ಪಿಕೊಳ್ಳುತ್ತಾನೆ. ಇವನಿಗೆ ತನ್ನ ಅಣ್ಣನ ಮಗ ಕಿಟ್ಟಿಯೆಂದರೆ ಅಪಾರವಾದ ಪ್ರೀತಿ. ಕಾರಣ ಇವನೇ ನಮ್ಮ ವಂಶವನ್ನು ಬೆಳಗುವ ವ್ಯಕ್ತಿಯಾಗಿದ್ದಾನೆ ಎಂಬುದು. ಆದರೆ ಚಿನ್ನವ್ವ ಇವನನ್ನು ಕಂಡರೆ ಎಲ್ಲಿಲ್ಲದ ಸಿಟ್ಟು. ಕಿಟ್ಟಿ ಒಬ್ಬನಿಗೇ ಹೆಚ್ಚು ಜಮೀನು ಉಳಿಯುತ್ತದೆಂಬುದೇ ಇದಕ್ಕೆ ಕಾರಣ.

'ಪರಸಂಗದ ಗೆಂಡೆತಿಮ್ಮ' ಕಾದಂಬರಿಯಲ್ಲಿಯೂ ಎಲ್ಲಾ ಅಣ್ಣತಮ್ಮಂದಿರು ಭಾಗವಾಗುವಂತೆ ಆಗುತ್ತಾರಾದರೂ ಇದಕ್ಕೆ ಕಾರಣಗಳು ಮರಂಕಿಯ ಆಧುನಿಕ ಜೀವನ ಶೈಲಿ. ಇವಳು ಉಪಯೋಗಿಸುವ ಸ್ನೋ, ಪೌಡರ್, ಲಂಗ, ಬಾಡಿ, ಗಂಧದೆಣ್ಣೆ, ಮುಂತಾದವು. ಅಷ್ಟೇ ಅಲ್ಲದೆ ಬಟ್ಟೆಗಳನ್ನು ಮನೆಯ ಎಲ್ಲರೂ ಒಗೆಯುವಂತೆ ಸೌಳಿನಲ್ಲಿ ಒಗೆಯದೆ ಸಾಬೂನನ್ನು ಉಪಯೋಗಿಸುವುದು, ಎರಡು ದಿನಕ್ಕೊಮ್ಮೆ ಸೀರೆ ಬದಲಾಯಿಸುವುದು, ವಾರದಲ್ಲಿ ಎರಡು ಬಾರಿ ಸ್ನಾನ ಮಾಡುವುದು ಮುಂತಾದವು. ಮರಂಕಿಯ ಅತ್ತೆ ಬೇದಿಯಮ್ಮ ಮತ್ತು ಗೂಳನಾಯ್ಕನಿಗೆ ಸಹಿಸಲಾರದಂತಾಗುತ್ತದೆ. ಅಷ್ಟೇ ಅಲ್ಲದೆ ತನ್ನ ಸೊಸೆ ತನಗೇ ಎದುರಾಡುವುದು, ನಾನು ತನ್ನ ಸೊಸೆಗೆ ಸೋತೆ ಎಂದುಕೊಳ್ಳುವುದು, ದೊಡ್ಡ ಸೊಸೆಯಂತೆ ಹೊಂದಿಕೊಳ್ಳಲು ಆಗದೇ ಇರುವುದು ಇವೇ ಬೇದಿಯಮ್ಮಳಿಗೆ ಸಹಿಸಿಕೊಳ್ಳಲಾಗದ ವರ್ತನೆಗಳಾಗಿರುತ್ತವೆ. ನಮ್ಮ ಮಾತಿಗೆ ಬೆಲೆಕೊಡದ ಮರಂಕಿಯ ಮೇಲೆ ಬೇದಿಯಮ್ಮ ಮತ್ತು ಗೂಳನಾಯ್ಕ ಹಲ್ಲೆ ಮಾಡುತ್ತಾರೆ. ಮರಂಕಿಯನ್ನು ಗಾಢವಾಗಿ ಪ್ರೀತಿಸುವ ಗೆಂಡೆತಿಮ್ಮ ಹೆಂಡತಿಯ ಮೇಲೆ ಕೈಮಾಡಿದ ಅಣ್ಣನನ್ನು ಸೇರಿಸಿಕೊಂಡು ತನ್ನ ತಾಯಿಯನ್ನು ' ಲೇ... ಮುದ್ಕಿ ಸಾಕು ನಿಲ್ಸು ನಿನ್ನ ಕಿರಚಾಟ' ಎಂದು ಕೂಗುತ್ತಾನೆ. ಈ ವಿಷಯವನ್ನು ದೇವೀರಮ್ಮನಿಗೆ ಹೇಳಿದಾಗ ಸಹಜವಾಗಿ ಸಲಹೆ ನೀಡುವಂತೆ "ನೋಡ್ಲಾ ಗೆಂಡೆತಿಮ್ಮ, ಇವತ್ತಲ್ಲ ನಾಳಿಕಾದ್ರೂ ಬ್ಯಾರೆ ಆಗ್ಲೆಬೇಕು, ಸಾಯತನ್ಕ ಒಂದೇ ಇರಕಾದದ"[7] ಎನ್ನುತ್ತಾಳೆ. ಮರಂಕಿ ಇದರ ಬಗ್ಗೆ ಯಾವುದೇ ಮಾತಾಡುವುದಿಲ್ಲ. ಆದರೆ ಗೂಳಾನಾಯ್ಕನ ಹೆಂಡತಿ "ನಂಕೈಲೂ ಅವರ್ಜೊತೆ ಇರಕೆ ಆಗಕಿಲ್ಲ ಪಾಲಾಗೆ ಬುಡ್ಲಿ, ಒಡ್ಡ ಕನ್ನಡಿಯೇನೆ ಮಾಡಿದ್ರೂ ಕೂಡ್ಸಕಾದದ" ಎನ್ನುತ್ತಾಳೆ. ಇಲ್ಲಿನ ಪ್ರತಿಯೊಂದು ಸಂಘರ್ಷಕ್ಕೂ ಸ್ತ್ರೀಯೇ ಪ್ರಧಾನ ಕಾರಣವಾಗಿ ನಿಲ್ಲುತ್ತಾಳೆ. ಇವರಿಗೆ ಪರಸ್ಪರ ಭಿನ್ನವಾದ ಜೀವನಕ್ರಮಕ್ಕೆ ಹೊಂದಿಕೊಳ್ಳಲು ಸಾಧ್ಯವಾಗದೇ ಇರುವುದೇ ಕಾರಣ.

ದಟ್ಟವಾದ ಗ್ರಾಮೀಣ ಬದುಕನ್ನು ಚಿತ್ರಿಸುವ ಆಲನಹಳ್ಳಿ ಅವರ ಕಥನ ಸಾಹಿತ್ಯದಲ್ಲಿ ಹೊಸಬದುಕಿಗೆ ಆತೊರೆಯುವ ಯುವಕರಿಂದ ಆ ಕುಟುಂಬದಲ್ಲಿ ಉಂಟಾಗುವ ವಾತಾವರಣವನ್ನು ಲೇಖಕರು ಚೆನ್ನಾಗಿ ಚಿತ್ರಿಸಿದ್ದಾರೆ. 'ತಪ್ತ' ಕತೆಯಲ್ಲಿ ಇಂಥ ಒಂದು ಸಂಘರ್ಷ ಕಂಡುಬರುತ್ತದೆ. ಇಲ್ಲಿನ ನಿರೂಪಕ ಹೊಸ ಬದುಕಿಗೆ ಹಾತೊರೆಯುವುದು ಇವನ ತಾಯಿಗೆ ಸಹಿಸಲಾರದ ಯಾತನೆಯಾಗುತ್ತದೆ. ನಾಯಕ ಅಂತರ್‌ಜಾತಿ ಪ್ರೇಮವಿವಾಹವಾಗಲು ಇಚ್ಛಿಸಿದಾಗ ಅವನ ತಾಯಿ ತನ್ನ ಪೂರ್ವದ ಅಳಲನ್ನು ತೋಡಿಕೊಳ್ಳುತ್ತಾಳೆ.

ಅವರಿವರ ಕಾಲುಕಟ್ಟಿ ನಿನ್ನ ದೊಡ್ಡವನನ್ನಾಗಿ ಮಾಡಿದ್ದು ಈಗ ಇದಿರಾಡಕಲ್ಲ ಎಂದು ಪ್ರಶ್ನಿಸುತ್ತಾ ಗೊಣಗುತ್ತಾಳೆ. ಶಿಕ್ಷಣದ ಪ್ರಭಾವದಿಂದಲೋ ಅಥವಾ ಹೊಸ ಆಕರ್ಷಣೆಯ ಬದುಕಿನಿಂದಲೋ ನಾಯಕ ಅವರ ಅಕ್ಕನ ಮಗಳು ಗೌರಿಯನ್ನು ಮದುವೆಯಾಗಲು ನಿರಾಕರಿಸುತ್ತಾನೆ. ಅವನ ತಾಯಿ ತನ್ನ ಮಗನಿಗೆ ಗೌರಿಯನ್ನು ತಂದುಕೊಳ್ಳುತ್ತೇನೆಂದು ಮಾತುಕೊಟ್ಟಿದ್ದರಿಂದ ಕಳ್ಳುಬಳ್ಳಿಯ ಸಂಬಂಧವನ್ನು ಬಿಟ್ಟುಕೊಡಲು ಇಷ್ಟಪಡುವುದಿಲ್ಲ. ಆದರೆ ನಾಯಕ ಪ್ರತಿಕ್ಷಣದಲ್ಲೂ ಪ್ರಭಾಳನ್ನೇ ಇಷ್ಟಪಡುತ್ತಾನೆ. ಆದರೆ ಮತ್ತೊಂದು ಕಡೆ ತನ್ನ ತಾಯಿಯನ್ನು ಬಿಟ್ಟುಕೊಡದ ಗೌರಿಯನ್ನು ತಬ್ಬಲಿಮಾಡದ ಮನೋಭಾವದ ಅಸಹಾಯಕನಾಗಿ ನಿಲ್ಲುತ್ತಾನೆ. ಅಂತರಜಾತಿ ವಿವಾಹ ಅಥವಾ ಪ್ರೇಮವಿವಾಹಗಳು ಕೌಟುಂಬಿಕ ಸಂಘರ್ಷಕ್ಕೆ ಪ್ರಬಲ ಕಾರಣಗಳಾಗಿ ಕಂಡುಬರುತ್ತವೆ. ನೆಲಗುಮ್ಮ ಕತೆಯಲ್ಲಿ ಬರುವ ಕಿಟ್ಟಿಯ ಅಜ್ಜಿಯು ಇದೇ ರೀತಿ ಅಂತರಜಾತಿ ವಿವಾಹವನ್ನು ಅಲ್ಲಗಳೆಯುತ್ತಾಳೆ. ಪಜಾರದಲ್ಲಿ ಕೂತು ಕವಳ ಕುಟ್ಟುತ್ತಾ "ತನ್ನ ಮೊಮ್ಮಗಳ್ನ ಅದೂ ತಾನೇ ಎತ್ತಿ ಆಡಿಸಿದವಳನ್ನು ಕಟ್ಟಿಕೊಳ್ಳದೇ ಯಾವಳೋ ಕುಲಗೆಟ್ಟವಳ್ಗೆ ಕಟ್ಕೋತಿನಿ ಅಂತ ನಮ್ಮನೆ ದೇವ್ರು ದಿಂಡ್ರರ್ನ್ನಲ್ಲ ದೂರ ಮಾಡ್ತಿಯಲ್ಲೋ ಮನೆಹಾಳ"[3] ಎಂದು ತನ್ನ ನೋವನ್ನು ತೋಡಿಕೊಳ್ಳುತ್ತಾ ಬೈಯುತ್ತಾಳೆ. ಇದರಿಂದ ಅಜ್ಜಿಯನ್ನು ಎಷ್ಟು ಉತ್ಕಟವಾಗಿ ಪ್ರೀತಿಸುತ್ತಿದ್ದನೋ ಅಷ್ಟೇ ದ್ವೇಷಿಸತೊಡಗುತ್ತಾನೆ. ಆದ್ದರಿಂದಲೇ ಅವನು ಮಾವನ ಮಾತನ್ನು ಕೇಳಿ ಅಜ್ಜಿಯ ಸಾವನ್ನು ಕಂಡಾಗಲೂ ಯಾವುದೇ ರೀತಿಯಲ್ಲಿ ದೃತಿಗೆಡೆದೆ ಮನಸ್ಸಿನಲ್ಲಿಯೇ ದರಿದ್ರ ಎಲ್ಲಾ ಪಿಶಾಚಿಗಳೆ, ಕಾಡುವುದಕ್ಕೆಂದೇ ಅವತರಿಸಿ ಬಂದವೇನೋ ಎಂದುಕೊಂಡು ಶಪಿಸುತ್ತಾನೆ. ಈ ಕಿಟ್ಟಿಯು 'ತಪ್ತ'ದಲ್ಲಿ ಬರುವ ನಾಯಕನ ಪಾತ್ರಕ್ಕಿಂತ ಹೆಚ್ಚು ವೈಯಕ್ತಿಕವಾಗಿ ಕಂಡುಬರುತ್ತಾನೆ. ಅಲ್ಲಿ ತನ್ನ ಜಡ್ಡಿನ ತಾಯಿಯನ್ನು ಕಂಡು ಹೆದರುವನು. ಇಲ್ಲಿ ತನ್ನ ಅಜ್ಜಿಯ ಸಾವನ್ನೆ ಕಂಡರೂ ಯಾವುದೇ ದುಗುಡಕ್ಕೆ ಒಳಗಾಗುವುದಿಲ್ಲ. ಸಾವು ನೋವು ಎಲ್ಲರಿಗೂ ಇದ್ದದ್ದೆ ಎಂದು ಪ್ರಬುದ್ಧ ವಿಚಾರವಂತನಂತೆ ಕಂಡುಬರುತ್ತಾನೆ. ಆದರೂ ತನ್ನ ಅಜ್ಜನ ಸಾವು ಅವನನ್ನು ತೀವ್ರವಾಗಿ ನೋವಿಗೆ ಒಡ್ಡಿರುತ್ತದೆ. ಕಾರಣ ಅಜ್ಜ ಅವನನ್ನು ಅಗಾಧವಾಗಿ ಪ್ರೀತಿಸುತ್ತಿದ್ದದ್ದೆ ಆಗಿದೆ. ಒಂದೇ ಕುಟುಂಬದ ಹಲವು ಸದಸ್ಯರೊಂದಿಗೆ ಅವನ ಹೊಂದಾಣಿಕೆ ಭಿನ್ನವಾಗಿರುತ್ತದೆ. ಕಿಟ್ಟಿ ಇದೆಲ್ಲವನ್ನೂ ಮರೆತು ತನ್ನ ಬೌದ್ಧಿಕ ಬೆಳವಣಿಗೆ ಮತ್ತು ನಗರದ ಅನುಕೂಲಗಳನ್ನು ಅನುಭವಿಸುವುದರಿಂದ ತನ್ನ ಹಿಂದಿನ ಸಂಬಂಧಗಳನ್ನು ಮರೆತು ಬದುಕುವುದನ್ನು ರೂಢಿಸಿಕೊಳ್ಳುತ್ತಾನೆ. ಅಲ್ಲದೇ ಅಜ್ಜಿಯ ಸಾವಿಗೆ ತನ್ನಿಂದಾದ ಅತೃಪ್ತಿಯೇ ಪ್ರಬಲ ಕಾರಣವೆಂದು ತಿಳಿಯುತ್ತಾನೆ. ಕುಟುಂಬದ ಸಂಘರ್ಷಗಳು ಅತೃಪ್ತಿಯಿಂದಲೂ ಕೆಲವೊಮ್ಮೆ ಹೆಚ್ಚಾಗಿರುತ್ತವೆ. ಕಾಡುವಿನ ಸಾವಿತ್ರಮ್ಮ ಮತ್ತು ಭಾಸ್ಕರ ಇಬ್ಬರ ಸಂಬಂಧವನ್ನು ತಿಳಿದ ಸಾವಿತ್ರಮ್ಮನ ತಂದೆ ಅಯ್ನೋರು ಇವರ ಪ್ರೇಮಕ್ಕೆ ಅಡ್ಡಿಯುಂಟುಮಾಡುತ್ತಾರೆ. ಇದರಿಂದ ಇವಳ ಮನೆಯಲ್ಲಿ ಹಲವು ಬಾರಿ ಬೈಸಿಕೊಂಡಿದ್ದು, ಒಡೆಸಿಕೊಂಡಿದ್ದೂ ಇದ್ದು ಅಯ್ನೋರಿಗೆ ಸಾವಿತ್ರಮ್ಮಳ ಮೇಲೆ ಅತೃಪ್ತಿ ಉಂಟಾಗುತ್ತದೆ. ಪದೇ ಪದೇ ಒಂದೇ ವಿಷಯವನ್ನು ತೆಗೆದು ಜಗಳ ಮಾಡುವ ಅಯ್ನೋರ ಮೇಲೆಯೂ ಸಾವಿತ್ರಮ್ಮ ಅತೃಪ್ತಿ ಹೊಂದುತ್ತಾಳೆ. ಈ ಅತೃಪ್ತಿಗಳ ಕೊನೆಯೆಂದರೆ ಸಾವಿತ್ರಮ್ಮ ಕಿರುಮನೆಯಲ್ಲಿ ನೇಣುಹಾಕಿಕೊಳ್ಳುವುದು. ತಮ್ಮ ಮನೆಯಲ್ಲಿ ಎಲ್ಲವೂ ತನ್ನಂತೆಯೇ ನಡೆಯಬೇಕು ತನ್ನಿಂದಲೇ ಎಲ್ಲಾ ನಡೆಯುತ್ತದೆ ಎಂದ ತಿಳಿದಾಗ ಇಂತಹ ಅನಾಹುತಗಳಾಗುತ್ತವೆ. ಸಾವಿತ್ರಮ್ಮ ನೇಣುಹಾಕಿಕೊಂಡಿದ್ದರಿಂದ ಅಯ್ನೋರ ಗೌರವ ಊರಲ್ಲಿ ಕಡಿಮೆಯಾಗತೊಡಗುತ್ತದೆ. ಮನಸ್ಸಿಗೆ ನೆಮ್ಮದಿಯಿಲ್ಲ. ಪೊಲೀಸಿನವರ ಭಯ ಮುಂತಾದವುಗಳು ಪ್ರಾರಂಭವಾಗುತ್ತವೆ. ಚಂದ್ರೇಗೌಡರ ಕುಟುಂಬದಲ್ಲಿಯೂ ಇಂತಹದೇ ನಡೆಯುತ್ತದೆ. ಆದರೆ ಈ ಕುಟುಂಬದ ದುರಂತವೇ ಬೇರೆ ಚಂದ್ರೇಗೌಡರಿಗೆ ಮಕ್ಕಳಾಗಲಿಲ್ಲವೆಂಬ ಒಂದು ಕೊರಗು ಅವರನ್ನು ಇನ್ನೊಂದು ಹೆಣ್ಣಿನ ಸಂಬಂಧಕ್ಕೆ ಎಡೆಮಾಡಿಕೊಟ್ಟಿರುವುದು ಕಾಣುತ್ತದೆ. ಕಮಲಮ್ಮನಿಗೆ ಮಕ್ಕಳಾಗದಿದ್ದರೂ ಆಕೆ ಸದ್ಗೃಹಿಣಿಯಾಗಿ ಜೀವನ ಮಾಡುತ್ತಿರುತ್ತಾಳೆ. ಚಂದ್ರೇಗೌಡ ಮಾತ್ರ, ಇನ್ನೊಂದು ಹೆಣ್ಣು, ಇಸ್ಪೇಟು ಮುಂತಾದ ಜಮೀನ್ದಾರಿ

ಗುಣಗಳಿಂದ ಕಮಲಮ್ಮಳನ್ನು ಆಗಾಗ ಬಡಿದು ಹೊಡದು ಹಿಂಸಿಸುತ್ತಾನೆ. ಆದರೂ ಇವಳು ಅವನ ವಿರುದ್ಧ ಯಾವುದೇ ರೀತಿಯಲ್ಲಿ ತಿರುಗಿಬೀಳದೆ ಮೌನವಾಗಿಯೇ ಕಣ್ಣೀರಿಡುತ್ತಾಳೆ. ಅವಳು ಬುಜಂಗಯ್ಯನ ಹೆಂಡತಿ ಪಾರ್ವತಿಯಂತೆ ಗಂಡನ ವಿರುದ್ಧ ಕ್ರೌರ್ಯ ವ್ಯಕ್ತಪಡಿಸುವುದಿಲ್ಲ. ಇದೂ ಸಹ ಹಳ್ಳಿಯ ಹೆಣ್ಣುಮಕ್ಕಳು ತೋರುವ ಸಹನೆ ತಾಳ್ಮೆಯನ್ನು ಸೂಚಿಸುತ್ತದೆ. ಅದರೂ ಇಂಥವರು ಕೆಲವೊಮ್ಮೆ ಇದೆಲ್ಲವನ್ನೂ ಮೀರಿ ತನ್ನ ಕುಟುಂಬದಿಂದ ಚದುರಿ ಬರುತ್ತಾರೆ. ಸುಶೀಲ ಕುಟುಂಬದಲ್ಲಿಯೂ ಇಂತಹದೇ ಜಗಳವಿದ್ದು ಸುಶೀಲ ಸುಸಂಸ್ಕೃತ ಕುಟುಂಬದಿಂದ ಬಂದಿದ್ದು ತನ್ನ ಮನಸ್ಸಿಗೊಪ್ಪುವ, ತನ್ನನ್ನೂ ಇಷ್ಟಪಡುವ ಪುರುಷನನ್ನು ಬಯಸುವುದು ಹಾಗು ಅವನಿಗಾಗಿಯೇ ಜೀವನದಲ್ಲಿ ಬರುವ ಎಲ್ಲಾ ಕಷ್ಟಗಳನ್ನು ಸಹಿಸಿಕೊಳ್ಳುವುದು ಅವಳ ತಿಳಿವಳಿಕೆಯ ಹಲವು ಅನುಭವಗಳನ್ನು ಕಟ್ಟಿಕೊಡುತ್ತದೆ. ಬಳೆಶೆಟ್ಟರ ಕುಟುಂಬದಲ್ಲಿನ ಸಂಘರ್ಷವೇ ಬೇರೆ. ಶೆಟ್ಟರ ಎರಡನೇ ಹೆಂಡತಿ ಮೊದಲ ಹೆಂಡತಿಯ ಮಗಳಾದ ಸುಶೀಲಳಿಗೆ ಚಿತ್ರಹಿಂಸೆ ಕೊಡುವುದು, ಮಲತಾಯಿಯ ಸಹಜ ಗುಣವನ್ನೇ ತೋರಿಸುತ್ತದೆ. ಶೆಟ್ಟರು ಸುಶೀಲಳನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದರೂ ಅವಳಿಗೆ ಕೊಡುವ ಕಿರುಕುಳ ತಡೆಯಲಾಗದಾಗಿದ್ದರು. ಆದ್ದರಿಂದಲೇ ಮಗಳನ್ನು ಜೊತೆಯಲ್ಲಿಯೇ ವ್ಯಾಪಾರಕ್ಕೆ ಕರೆದೊಯ್ಯುತ್ತಿದ್ದರು. ಮಲತಾಯಿಯ ಈ ಧೋರಣೆಗೆ ಕಾರಣ ಸುಶೀಲಳಿಗೆ ಮದುವೆ ಖರ್ಚನ್ನು ಭರಿಸುವುದು, ಅದರಿಂದ ಸಾಲಮಾಡುವುದು, ಮನೆಮಠ ಕಳೆದುಕೊಳ್ಳುವುದು ಇವುಗಳೆಲ್ಲವನ್ನೂ ಯೋಚಿಸಿ ಸುಶೀಲ ಬುಜಂಗಯ್ಯನನ್ನು ಮದುವೆಯಾದಾಗ ಅವಳಿಗೆ ಒಂದು ರೀತಿಯಲ್ಲಿ ಖುಷಿಯೇ ಆಗಿರುತ್ತದೆ. ಇದು ಹೆಣ್ಣಿನ ಅಸೂಯೆಯನ್ನು ಸೂಚಿಸುತ್ತದೆಯಲ್ಲದೇ ಮಲತಾಯಿಯಲ್ಲಿ ಇರುವ ಸ್ವಾರ್ಥ ಬುದ್ಧಿಯ ಸೂಚನೆಯೂ ಆಗಿದೆ. ಆದರೆ ಬಳೆಶೆಟ್ಟರ ಆಲೋಚನೆಯೇ ಬೇರೆ. ಅವರಿಗೆ ಇವರ ಗೌರವ, ಮರ್ಯಾದೆ, ಸಮಾಜದಲ್ಲಿನ ಸ್ಥಾನ ಮಾನಗಳೇ ಮುಖ್ಯವಾದವೇ ವಿನಃ ತನ್ನ ಮಗಳ ಮದುವೆಯನ್ನು ಒಪ್ಪಿಕೊಳ್ಳುವುದಿಲ್ಲ. ಅಷ್ಟೇ ಅಲ್ಲದೆ ತನ್ನ ಮಗಳು ಸತ್ತಳೆಂದು ತಣ್ಣೀರು ಸುರಿಯುತ್ತಾನೆ. ಮಾಡುತ್ತಾರೆ. ಸ್ವಾಭಿಮಾನಿಯಾದವನು ತೆಗೆದುಕೊಳ್ಳುವ ನಿರ್ಣಯಗಳು ಯಾವಾಗಲೂ ಕಠಿಣವಾಗಿಯೇ ಇರುತ್ತವೆ. ಆದ್ದರಿಂದಲೇ ಸುಶೀಲ ಆಸ್ಪತ್ರೆಯಲ್ಲಿ ಸಾವು ಬದುಕಿನ ನಡುವೆ ಇದ್ದರೂ ಸ್ವಾಭಿಮಾನಿಯಾದ ಶೆಟ್ಟರು ತನ್ನ ಮಗಳಾದರೂ ಅವಳನ್ನು ಒಮ್ಮೆಯೂ ನೋಡಲು ಇಷ್ಟಪಡುವುದಿಲ್ಲ. ಬುಜಂಗಯ್ಯನೂ ಸ್ವಾಭಿಮಾನಿಯಂತೆ ಕಂಡುಬಂದರೂ ಅವನು ಇಷ್ಟೊಂದು ಕಠಿಣ ನಿರ್ಧಾರವನ್ನು ತೆಗೆದುಕೊಳ್ಳುವುದಿಲ್ಲ. ಆಗಾಗ ತನ್ನ ಹಳೆಯ ಮನೆಗೆ ಹೋಗಿ ಮಕ್ಕಳನ್ನು ಮಾತಾಡಿಸಿಕೊಂಡು ಬರುತ್ತಿದ್ದನು. ಆದರೇ ಕೊನೆಗಾಲದಲ್ಲಿ ಮಾತ್ರ ಅತ್ಯಂತ ಸ್ವಾಭಿಮಾನಮೂರ್ತಿಯಂತೆ ಕಂಡುಬರುತ್ತಾನೆ. ಅವನು ಕಣ್ಣಿನ ದೃಷ್ಟಿ ಕಳೆದುಕೊಂಡಾಗ ಪಾರ್ವತಿಯೇ ಬಂದು ಸುಶೀಲಳ ಜೊತೆಗೇ ಬಂದು ತನ್ನ ಮನೆಯಲ್ಲಿ ಇರುವಂತೆ ಕೇಳಿಕೊಂಡಾಗಲೂ ಅವನು ತೆಗೆದುಕೊಳ್ಳುವ ನಿರ್ದಾರಗಳು ನಿಜವಾಗಿಯೂ ಹೆಮ್ಮೆಪಡುವಂತಹವು. ಎಷ್ಟೇ ಕಷ್ಟಬಂದರೂ ಸಹಿಸಿಕೊಳ್ಳುವ ಗುಣವನ್ನು ಅವನಾಗಲೇ ರೂಢಿಸಿಕೊಂಡಿರುತ್ತಾನೆ.

ಶ್ರೀಕೃಷ್ಣ ಆಲನಹಳ್ಳಿ ಅವರ ಕಥನ ಸಾಹಿತ್ಯದಲ್ಲಿ ಮಕ್ಕಳೂ ಕೆಲವೊಮ್ಮೆ ಮೌನವಾಗಿ ಸಂಘರ್ಷವನ್ನು ಪ್ರಾರಂಭಿಸುತ್ತಾರೆ. ಕಿಟ್ಟಿ ಹೆದರುವುದು ಹಿರಿಯರ ಕೆಟ್ಟಗುಣಗಳಿಗೆ. ಮಾವ ಚಂದ್ರೇಗೌಡ ಅತ್ತೆಯನ್ನು ಹೊಡೆಯುವುದು ಹಿಂಸಿಸುವುದು ಕಂಡು ಮಾವನನ್ನು ರಾಕ್ಷಸ ರೂಪದಲ್ಲಿ ಕಾಣುತ್ತಾನೆ. ಮನೆಯಲ್ಲಿ ಅತ್ತೆ ಅಳುವುದಕ್ಕೆ ಕಾರಣ ತಿಳಿಯದೇ ಪದ್ದಾಡುತ್ತಾನೆ. ಆದರೆ 'ಗೋಡೆ' ಕಾದಂಬರಿಯ ಕಿಟ್ಟಿ ತನ್ನ ಚಿಕ್ಕಮ್ಮ ತನ್ನ ತಾಯಿಗೆ 'ನನಗೆಲ್ಲ ಗೊತ್ತು ಹೋಗೆ ನನ್ನ ಸವತಿ' ಎಂದು ಹೇಳಿದ್ದನ್ನು ಯಾರಿಗೂ ಹೇಳುವುದಿಲ್ಲ. ಇದು ಅವನಿಗೆ ಆಶ್ಚರ್ಯದ ಜೊತೆ ಸಿಟ್ಟನ್ನೂ ತರಿಸುತ್ತದೆ. ಮನೆ ಬೇರೆಯಾಗಿ ಮನೆಯ ಮಧ್ಯದಲ್ಲೊಂದು ಗೋಡೆ ನಿಂತಾಗ ತನ್ನ ಚಿಕ್ಕಪ್ಪನನ್ನು ಮಾತನಾಡಿಸಲು ಸಾಧ್ಯವಿಲ್ಲವಲ್ಲಾ ಎಂದು ನೋಯುತ್ತಾನೆ. ಇದು ಅವರಿಬ್ಬರ ಆತ್ಮೀಯ ಸಂಬಂಧ, ಪ್ರೀತಿಯನ್ನೂ ಸೂಚಿಸಿದರೆ ಅವಳ ಚಿಕ್ಕಮ್ಮಳು ಎಷ್ಟು ಕ್ರೂರಿ, ಕೆಟ್ಟವಳು

ಎಂದುಕೊಳ್ಳುತ್ತಾನೆ. ಇದಕ್ಕೆ ಮನೆ ಪಾಲಾದುದಷ್ಟೇ ಅಲ್ಲಿ ಅವಳು ಆಗಾಗ ಸಾಕಿಯನ್ನು ಹೊಡೆಯುವುದು, ಅಜ್ಜಿಯೊಂದಿಗೆ ಜಗಳ, ಚಿಕ್ಕಪ್ಪನೊಂದಿಗೆ ಜಗಳ, ತಾಯಿಯೊಂದಿಗೆ ಜಗಳವಾಡುವುದೇ ಆಗಿದೆ. ಕಿಟ್ಟಿಯ ಮನಸ್ಸು ಸಾಮರಸ್ಯವನ್ನು ಬಯಸುತ್ತಾದರೂ ಕೆಂಪೇಗೌಡ ತನ್ನ ತಾಯಿಯೊಂದಿಗೆ ಮಾತನಾಡುವಾಗ ತನ್ನ ತಾಯಿ ಅವನ ಸಹಾಯವನ್ನು ಕೇಳುವಾಗ ತಾಯಿಯ ಬಗ್ಗೆಯೂ ಸಿಟ್ಟಾಗುತ್ತಾನೆ. ಅವನ ಚಿಕ್ಕಪ್ಪನಿಗೂ ಇದು ಹಿಂಸೆಯೆನಿಸುತ್ತದೆ. ತಮ್ಮ ಮನೆಯನ್ನು ಹಾಳುಮಾಡಬೇಕೆಂದೇ ಕಾಯುತ್ತಿರುವ ವ್ಯಕ್ತಿಯೊಂದಿಗೆ ವಿಶ್ವಾಸ ಬೆಳೆಸಿಕೊಂಡಾಗ ಕುಟುಂಬದಲ್ಲಿ ಭೀತಿಯ ವಾತಾವರಣ ಉಂಟಾಗುತ್ತದೆ. ಕಿಟ್ಟಿ ತಾಯಿಯೊಂದಿಗೆ ಸರಿಯಾಗಿ ಮಾತನಾಡುವುದೂ ಕಡಿಮೆಯಾಗುತ್ತದೆ. ಕೆಂಪೇಗೌಡನ ಆಳು ಮನೆಯಲ್ಲಿ ಜೀತಕ್ಕೆ ಬರುವುದು ಇಷ್ಟವಿರಲಿಲ್ಲ. ಇದನ್ನೂ ಮೌನವಾಗಿಯೇ ಕಿಟ್ಟಿ ಮತ್ತು ಅವನ ಚಿಕ್ಕಪ್ಪ ಪ್ರತಿಭಟಿಸುತ್ತಾರೆ. ಕಾದಂಬರಿಯ ಕೊನೆಯಲ್ಲಿ ಕಿಟ್ಟಿಯು ಗಾಡಿ ಒಡೆಯಬೇಕು ಎಂದುಕೊಂಡು ಪಕಾಳಿಯನ್ನು ಕೇಳಿದಾಗ ದಾರಿ ತುಂಬಾ ಕೊರಕಲು, ಬ್ಯಾಡಿ ಬುಡಿ, ಗಾಡಿ ಬ್ಯಾರೆ ನಮ್ದಲ್ಲ ಎಂದಾಗ ಅದು ಕೆಂಪೇಗೌಡನದೆಂದು ತಿಳಿದು ಅಲ್ಲಿ ಕೂರಲೂ ಇಷ್ಟವಾಗದೇ ಇಳಿದರೆ, ಮೀನಾಕ್ಷಿ ಏನೆಂದುಕೊಳ್ಳುತ್ತಾಳೋ ಎಂದು ಮೌನವಾಗಿಯೇ ಇದ್ದು ತನ್ನ ಪ್ರತಿಭಟನೆಯನ್ನು ಸೂಚಿಸುತ್ತಾನೆ. ತನ್ನ ತಂದೆಯಂತೆಯೇ ಯಾರನ್ನು ಬೇಡದ ವ್ಯಕ್ತಿಯಾಗಿ ಬಾಳಬೇಕು ಎನ್ನುವ ಛಲ ಇವನದಾಗಿದ್ದರಿಂದ ಯಾರ ಸಹಾಯವನ್ನೂ ಬೇಡಬಾರದು ಎಂದು ಕೊಂಡು ತನ್ನ ತಾಯಿಯೊಂದಿಗೆ ಮೌನವಾಗಿಯೇ ಸಂಘರ್ಷವನ್ನು ಸಾಧಿಸುತ್ತಾನೆ. ಇಲ್ಲಿನ ಮೌನ ಸಂಘರ್ಷ ಪುರುಷನದಾದರೇ ಸೀಮಂತದಲ್ಲಿ ಬರುವ ಪದ್ಮಳದು ಸ್ತ್ರೀ ಮೌನ ಸಂಘರ್ಷವನ್ನು ಸೂಚಿಸುತ್ತದೆ. ಗಂಡನೊಂದಿಗೆ ಜೀವನ ಸಾಗಿಸುತ್ತಿದ್ದಾಗ ಅತ್ತೆ "ಮಗನಿಗೆ ತಕ್ಕ ಹೆಂಡತಿ ಸಿಕ್ಕಲಿಲ್ಲ, ಮದುವೆಯಾಗಿ ಮೂರು ವರ್ಷವಾಯ್ತು, ಏನೂ ಕಾಣೆ. ಯಾವ ದೇವರೂ ಮಾಡಿದರೂ ಏನೂ ಇಲ್ಲ. ಹುಟ್ಟು ಬಂಜೆ"[೩] ಎಂದಾಗ ಅತ್ತೆ ಮತ್ತು ಗಂಡನ ಬಗ್ಗೆ ರೊಚ್ಚು ಸಿಟ್ಟುಗಳು ಬಂದರೂ ತಡೆದುಕೊಂಡು ಇರುತ್ತಾಳೆ. ಹೆಣ್ಣಿಗೆ ತಾಯಿಯಾಗುವ ಆಸೆಯಾಗುತ್ತದೆಯಾದರೂ ಇಲ್ಲಿನ ಪದ್ಮಳಿಗೆ ಅದರ ಅವಶ್ಯಕತೆ ಇರುವುದಿಲ್ಲ. ಆದರೆ ಅತ್ತೆ ಮತ್ತು ಜನರಾಡುವ ಬಂಜೆ ಎನ್ನುವ ಮಾತು ಅವಳಿಂದ ಸಹಿಸಲಾರದಾಗಿರುತ್ತದೆ. ಅದ್ದರಿಂದ ಅವಳು ಅನಿರೀಕ್ಷಿತವಾಗಿ ಶ್ರೀಧರನೊಂದಿಗೆ ಸಂಬಂಧ ಹೊಂದುತ್ತಾಳೆ. ಇದನ್ನು ಕಂಡಾಗಲೂ ಅತ್ತೆ ವಯಸ್ಸಿಗೆ ಬಂದ ಹುಡುಗನ ಕೂಡ ಹೀಗೆ ಚಕ್ಕಂದವಾಡುವ ಸೊಸೆಯನ್ನು ಪಡೆದ ತಾನು ಮಾಡಿದ ಪಾಪವಾದರೂ ಏನೆಂದು ಹಣೆ ಚಚ್ಚಿಕೊಂಡದ್ದನ್ನು ಕಂಡ ಮಗ ತನ್ನ ಹೆಂಡತಿಗೆ "ಸಾಯುವ ಮುದುಕಿ ಪದ್ಮ, ಮುಪ್ಪಿನಲ್ಲೇಕೆ ಮನಸ್ಸು ನೋಯ್ಸೋದು"[೪] ಎಂದು ಹೇಳುವಲ್ಲಿ ಅಸಹಾಯಕತೆ ಬಿಂಬಿತವಾಗಿದೆ. ಇದೆಲ್ಲವನ್ನೂ ಪದ್ಮ ಮೌನವಾಗಿಯೇ ವಿರೋಧಿಸುತ್ತಾಳೆ. ಸೀಮಂತದ ನಾಯಕ ಅವನ ವೈಯಕ್ತಿಕ ವಿಷಯಗಳನ್ನು ಮಾತ್ರ ಯೋಚಿಸುತ್ತಾನೆ. ಇವನಲ್ಲಿ ದೌರ್ಬಲ್ಯಗಳಿದ್ದುದರಿಂದ ಮನೆಯ ಯಾವುದೇ ವಿಚಾರದಲ್ಲಿಯೂ ಸ್ಪಷ್ಟವಾದ ನಿರ್ಧಾರವಿಲ್ಲ. ಇವನು ಅಂತರ್ಮುಖಿಯಾಗಿರುತ್ತಾನೆ. ಈ ಕತೆಯ ಸಮಸ್ಯೆಗಳೆಲ್ಲವೂ ಆ ಪಾತ್ರಗಳ ವೈಯಕ್ತಿಕ ಸಮಸ್ಯೆಗಳಾಗಿರುವುದನ್ನು ಕಾಣಬಹುದು.

ಪದ್ಮಳಿಗಿಂತ ಭಿನ್ನವಾದದ್ದು 'ಶ್ರಾವಣ' ಕಥೆಯ ಶಕುಂತಲೆಯದಾಗಿದೆ. ಪದ್ಮ ಯಾವುದನ್ನೂ ಧೈರ್ಯವಾಗಿ ಹೇಳಿಕೊಳ್ಳುವುದಿಲ್ಲ. ಆದರೆ ಅವಳು ತನ್ನ ಮೊದಲ ಪ್ರೀತಿಯಿಂದ ವಂಚಿತಳಾದರೂ ಮದುವೆಯಾಗದೇ ಉಳಿದಿದ್ದು ನಂತರದಲ್ಲಿ ಅವಳ ಯೌವನದ ಇಳಿವಯಸ್ಸಿನಲ್ಲಿ ಜನಾರ್ಧನ ಪ್ರೀತಿಗೆ ಒಪ್ಪಿಗೆ ಸೂಚಿಸುವಂತೆ, ತಾನು ಅಂದುಕೊಂಡಿದ್ದನ್ನು ಧೈರ್ಯವಾಗಿ ಕುಟುಂಬದ ಎಲ್ಲರಿಗೂ ಹೇಳುವ ಧೈರ್ಯ ಮಾಡಿ "ತನ್ನ ದೃಢನಿರ್ಧಾರದ ವಿಷಯವನ್ನು ಹೇಳಿಬಿಡಬೇಕು. ಅಪ್ಪ, ಅವ್ವ, ಅಣ್ಣ, ತಂಗಿಗೆಲ್ಲ ಹೇಳಿಬಿಡಬೇಕು. ಇದರಿಂದ ದೂರವಾದರೂ ಸರಿಯೇ ಇದೀಗ ಹತ್ತಿರವಿದ್ದೂ ದೂರದಲ್ಲಿದ್ದಂತೆ ಬದುಕುತ್ತಿಲ್ಲವೆ"[೫] ಎಂದುಕೊಳ್ಳುತ್ತಾಳೆ. ಇಲ್ಲಿ ಆಕೆಗೆ ಕೇವಲ ತನ್ನ ಪ್ರಿಯಕರನ ವಿರಸದ ಜೊತೆಗೆ ತನ್ನ ಕುಟುಂಬದ ಎಲ್ಲರೊಂದಿಗೆ ಸಿಟ್ಟಿರುವುದು ವ್ಯಕ್ತವಾಗುತ್ತದೆ. ಕುಟುಂಬದ

ಎಲ್ಲರನ್ನೂ ಧಿಕ್ಕರಿಸುವಂತೆಯೇ ಅಂತರ್‌ಜಾತಿ ವಿವಾಹವಾಗಲು ಮುಂದಾಗುತ್ತಾಳೆ. ಇದರಿಂದಲೇ ಶಕುಂತಲೆಯ ಪ್ರತಿಭಟನೆ ಪದ್ಮಳಿಗಿಂತಲೂ ಕಠಿಣವಾಗಿರುತ್ತದೆ. ಪದ್ಮಳಂತೆ ಲಲಿತ ಕೂಡ ತನ್ನ ಕುಟುಂಬದಲ್ಲಿ ಬರುವ ಕಷ್ಟಗಳನ್ನು ಸಹಿಸಿಕೊಳ್ಳುತ್ತಾಳೆ. ಇದಕ್ಕೆ ಕಾರಣ ಅವರು ಬೆಳೆದ ಬಂದ ಪರಿಸರ ಎಂಬುದು 'ಸಂಬಂಧ' ಕಥೆಯಲ್ಲಿ ತಿಳಿಯುತ್ತದೆ. ಬ್ರಾಹ್ಮಣ ಜಾತಿಯ ಲಲಿತ ಮದುವೆಯಾದ ನಂತರ ತವರಿನೊಂದಿಗೆ ತನ್ನ ಗಂಡ ಜಗಳವಾಡಿದ್ದ. ಅವಳ ಗಂಡ ಎಷ್ಟೊಂದು ಕ್ರೂರಿಯೆಂದರೇ ತನ್ನ ಮಗಳು ನಾಯಿಕಚ್ಚಿ ಸಾಯುವ ಸ್ಥಿತಿಯಲ್ಲಿದ್ದರೂ "ಅಷ್ಟು ಹಣ ಎಲ್ಲಿ ತರೋದು, ಸ್ವಲ್ಪ ದಿನ ಹೀಗೆ ಕಿರುಚ್ತಾ ಕಿರುಚ್ತಾ ಹಾಗೆ ನಿಂತೋಗ್ತದಂತೆ"[೬] ಎಂದು ಹೇಳುತ್ತಾನೆ. ಅಷ್ಟೇ ಅಲ್ಲದೆ ಲಲಿತಳನ್ನು ಸಾಯಬೀಳ ಹೊಡೆಯುವುದು ದೇವ್ರಂತ ಲಲಿತಮ್ಮೋರ ಸಾಯಬೀಳ ಹೊಡೆದ. ನಾವಿಲ್ದೇ ಇದ್ರೆ ಕೊಂದೇ ಹಾಕ್ತಿದ್ದ. ನಿಮ್ಮನ್ನ ಕೆಟ್ಟಕೆಟ್ಟದಾಗಿ ಅಂತಿದ್ದ ಅವನ ಬಾಯ್ಗೆ ಹುಳಬೀಳ... ಎಂದು ವಟಾರದ ಹೆಂಗಸರು ಹೇಳುವುದು ಅವನ ಕ್ರೌರ್ಯ, ಸಿಟ್ಟನ್ನು ವ್ಯಕ್ತಪಡಿಸುತ್ತದೆ. ಇಷ್ಟೆಲ್ಲಾ ಆದರೂ ಗಂಡನೊಂದಿಗೆ ಜಗಳಕ್ಕಿಳಿಯದೇ ತನ್ನ ತೌರುಮನೆಯನ್ನೂ ಜ್ಞಾಪಿಸಿಕೊಳ್ಳದಷ್ಟು ಮನಸ್ಸನ್ನು ಕಠಿಣಮಾಡಿಕೊಳ್ಳುತ್ತಾಳಾದರೂ ಗಂಡನೊಂದಿಗೆ ಒಂದೂ ಮಾತನಾಡದೆ ಇರುತ್ತಾಳೆ. ಕಾರಣ ಸ್ವಾಭಿಮಾನ ಮತ್ತು ತನ್ನ ಮನೆ ಗೌರವ ಮತ್ತು ಗಂಡನ ಮರ್ಯಾದೆಯನ್ನು ಕಾಪಾಡಬೇಕೆನ್ನುವ ಹಳ್ಳಿಯ ಮುಗ್ಧ ಹೆಣ್ಣುಮಗಳ ತಿಳುವಳಿಕೆಯಾಗಿದೆ.

'ಸುಟ್ಟತಿಕದ ದೇವರು' ನೀಳ್ಗತೆಯಲ್ಲಿ ಎರಡು ವಿಭಿನ್ನ ಸಂಘರ್ಷಗಳನ್ನು ಒಳಗೊಂಡಿದೆ. ಇಲ್ಲಿನ ನಿರೂಪಕರ ಕುಟುಂಬ ಮತ್ತು ದೊಡ್ಡವರ ಕುಟುಂಬಗಳು ಪರಸ್ಪರ ವಿರುದ್ಧವಾಗಿವೆ. ನಿರೂಪಕನು ವಿದ್ಯಾಭ್ಯಾಸ ಮುಗಿಸಿ ನಗರದಲ್ಲಿ ನೌಕರಿ ಹೊಂದಿದ್ದರೂ ಇವನ ಕುಟುಂಬದ ಸಂಬಂಧಿಗಳು ಇವನ ವರ್ತನೆ ಮತ್ತು ಅಭಿಪ್ರಾಯಗಳಿಗೆ ವಿರುದ್ಧವಾಗಿರುತ್ತಾರೆ. ಆದರೆ ದೊಡ್ಡವರ ಮನೆಯಲ್ಲಿ ಶನಿದೇವರು ಓದುವುದಿಲ್ಲಾ, ಕೆಲಸ ಮಾಡುವುದಿಲ್ಲ. ಇದೂ ಸಹ ಈ ಕುಟುಂಬದಲ್ಲಿ ದೊಡ್ಡವರಿಗೆ ಬೇಸರ ತರಿಸುತ್ತದೆ. ನಿರೂಪಕ ತಾನು ಇಷ್ಟಪಟ್ಟ ಹೆಣ್ಣನ್ನು ಮದುವೆಯಾಗಿ ನನ್ನ ವಂಶದಲ್ಲಿ ಯಾರೂ ಮಾಡಿರದ ಪಾಪ ನಾನು ಮಾಡಿದೆ ಅಂತ, ಯಾರು ಸತ್ತುಟ್ಟುವಾಗಲೂ ನನಗೆ ತಿಳಿಸಲಿಲ್ಲ, ವರ್ಷ ವರ್ಷ ಮಾಡುತ್ತಿದ್ದ ಪಕ್ಷದಲ್ಲಿ ನನಗೂ ಎಡೆ ಇಟ್ಟಾಗಿತ್ತು ಎಂದುಕೊಳ್ಳುವುದು. ಸಾಯದೇ ಬದುಕಿದ್ದವರಿಗೆ ತಿಥಿ ಮಾಡುವುದು ಈ ಕುಟುಂಬದ ಸಿಟ್ಟನ್ನು ದ್ವೇಷವನ್ನು ಸೂಚಿಸುತ್ತದೆ. ಆದರೂ ಒಂದು ದಿನ ನಿರೂಪಕರ ಕುಟುಂಬದ ಹಿರಿಯರು ಅವನ ಮನೆಗೆ ಬಂದದ್ದು ಇವರ ಮಧ್ಯೆ ಮತ್ತೇ ಸಂತೋಷದ ವಾತಾವರಣ ಉಂಟಾಗುತ್ತದೆ. ಒಂದೇ ಕಥೆಯಲ್ಲಿ ಎರಡು ವಿಭಿನ್ನ ಕುಟುಂಬಗಳನ್ನು ಆಲನಹಳ್ಳಿ ಚಿತ್ರಿಸಿದ್ದಾರೆ. ದೊಡ್ಡವರ ಕುಟುಂಬದಲ್ಲಿನ ದುರಂತಕ್ಕೆ ದೊಡ್ಡವರ ಅವಿವೇಕದ ನಡತೆಯೇ ಕಾರಣವಾಗಿರುತ್ತದೆ. ಅಷ್ಟೇ ಅಲ್ಲದೆ ಅವರ ಮಗ ಶನಿದೇವರಾಗಿ ಊರಿನಲ್ಲಿ ಪ್ರಸಿದ್ಧನಾಗಿರುತ್ತಾನೆ. ಇವನ ನಡವಳಿಕೆಯೂ ಇದಕ್ಕೆ ಒಂದು ಕಾರಣವಾಗಿರುತ್ತದೆ. "ಇದ್ದರೆ ಇದ್ದ ಎದ್ದರೆ ಎದ್ದ ಅನ್ನೋ ಅಂಗಾಗವ್ನೆ ಈ ವಯಸ್ನಲ್ಲಿ ನಾನು ಕತ್ಲೆ ಕಾವಳ ಅನ್ನೋದು ಕಾಣ್ದೆ ದುಡಿಬೇಕು. ಎಲ್ಲಾ ನನ್ನ ಕರ್ಮ"[೭] ಎಂದುಕೊಳ್ಳುವುದು ಮಗನ ಬಗ್ಗೆ ಅಸಹ್ಯವನ್ನು ಬೇಸರವನ್ನು ಸೂಚಿಸುತ್ತದೆ. ಇವರ ಮಗನೂ ಉಂಡಾಡಿ ಗುಂಡನಾಗಿ ಊರೂರು ತಿರುಗುತ್ತಾನೆ. ಮದುವೆಯಾದ ಮೇಲೆ ಇವನ ಕುಟುಂಬ ಭೀಕರ ದುರಂತಕ್ಕೆ ಒಳಗಾಗುತ್ತದೆ. ದರಂತಗಳಿಂದ ಕೊನೆಗೊಳ್ಳುವ ಕುಟುಂಬಗಳಲ್ಲಿ ಗೆಂಡೆತಿಮ್ಮನದೂ ಒಂದಾಗಿದೆ. ತನ್ನ ತಾಯಿ ಮತ್ತು ಅಣ್ಣನಿಂದ ಬೇರೆಯಾಗಿ ಸ್ವತಂತ್ರವಾಗಿ ಬೇರೆ ಕುಟುಂಬ ಪ್ರಾರಂಭಿಸಿದ್ದ ಇವನ ಕುಟಂಬದಲ್ಲಿಯೂ ಕಲಹ ಪ್ರಾರಂಭವಾಗುತ್ತದೆ. ಇವರಲ್ಲಿ ಸರಸ ಸಲ್ಲಾಪಗಳಿದ್ದರೂ ಮನಸ್ಸಿನಲ್ಲಿ ಪರಸ್ಪರ ವಿರಸವಿರುವುದು ಕಾಣುತ್ತೇವೆ. ಆದ್ದರಿಂದಲೇ ದೇವೀರಮ್ಮ ಕಳುಹಿಸಿಕೊಟ್ಟ ತಿಂಡಿಯನ್ನು ತೆಗೆದುಕೊಟ್ಟಾಗ ಮರಂಕಿ "ಛೇ... ನಾನೆಷ್ಟು ಯೇಳಿದ್ರು ನೀವು ಕೇಳ್ತೀರ ನೀವೇನು ಬಿಕ್ಕಸದವರ ಅವರಿವರ ಮನೆ ಯಂಜಲು... ಥೂ ನೀವು ತಿಂತೀರ ಅಂದ್ರೆ ನಂಗೇನಂಥ ಗಾಚಾರ"[೮] ಎಂದಾಗ ದೇವೀರಮ್ಮನವರ ಮೇಲಿನ ಅಭಿಮಾನ ಮರಂಕಿಯ ಮೇಲಿನ ಪ್ರೀತಿಯನ್ನೂ ಮೆಟ್ಟನಿಲ್ಲುವಂತೆ ಮರಂಕಿಯನ್ನು ಹೀನಾಯವಾಗಿ ಬೈಯುತ್ತಾನೆ.

ಇದು ಅವಳು ಮೊದಲಿನಿಂದಲೂ ಮಾಡಿಕೊಂಡು ಬಂದ ತಪ್ಪುಗಳನ್ನೆಲ್ಲಾ ಮತ್ತೊಮ್ಮೆ ಹೇಳುವಂತಿದೆ. ಇದು ಮರಂಕಿಗೆ ಗುಂಡನ ಬಗ್ಗೆ ಅಸಹ್ಯವನ್ನು ಮತ್ತು ತಿರಸ್ಕಾರವನ್ನೂ ಉಂಟುಮಾಡುತ್ತದೆ. ಮರಂಕಿಯಂತೆಯೇ ಇದ್ದಕ್ಕಿದ್ದಂತೆ ತಲ್ಲಣವನ್ನುಂಟುಮಾಡುವವಳು ಚಿನ್ನವ್ವ ಕೂಡ ಹೌದು. ಮಾಸ್ತಿ ಹಬ್ಬದ ದಿನ ತಾಯವ್ವ ತಾನು ತಂದಿದ್ದ ಸೀರೆಯನ್ನು ತಾನೇ ಮುಂದೆ ಹೋಗಿ ಬಡವೆ ಹೆಡಿಗೆಯಾಗಿಟ್ಟಳು, ಚಿನ್ನವ್ವ ಸ್ತಬ್ಧವಾಗಿಯೇ ನಿಂತಿದ್ದಳು. ದೇವರ ಗುಡಿ ಹೆಡಿಗೆಯನ್ನೆತ್ತಿ ತಲೆಮೇಲೆ ಇಟ್ಟುಕೊಳ್ಳುವಷ್ಟರಲ್ಲಿ ಚಿನ್ನವ್ವ ಆವೇಶಬಂದವಳಂತೆ ಸೀರೆಯನ್ನೆತ್ತಿ ಅಂಗಳದ ಬೀದಿಗೆ ಎಸೆದಾಗ ಗದ್ದಲ ಶುರುವಾಗುತ್ತದೆ. ಇದು ತಾಯವ್ವಳಿಗಾಗುವ ಅವಮಾನ. ಯಾರು ಎಷ್ಟೇ ಸಮಾಧಾನ ಮಾಡಿದರೂ ಕಲ್ಲಿನಂತೆ ಕೂತುಬಿಡುತ್ತಾಳೆ.

## ಅಡಿ ಟಿಪ್ಪಣಿಗಳು

೧. ಶ್ರೀಕೃಷ್ಣ ಆಲನಹಳ್ಳಿ, ಪರಸಂಗದ ಗೆಂಡೆತಿಮ್ಮ, ಪು. ೮೫

೨. ಶ್ರೀಕೃಷ್ಣ ಆಲನಹಳ್ಳಿ, ಆಲನಹಳ್ಳಿ ಸಮಗ್ರ ಕಥೆಗಳು, ಪು. ೯೨

೩. ಶ್ರೀಕೃಷ್ಣ ಆಲನಹಳ್ಳಿ, ಆಲನಹಳ್ಳಿ ಸಮಗ್ರ ಕಥೆಗಳು, ಪು. ೪೦

೪. ಶ್ರೀಕೃಷ್ಣ ಆಲನಹಳ್ಳಿ, ಆಲನಹಳ್ಳಿ ಸಮಗ್ರ ಕಥೆಗಳು, ಪು. ೪೦

೫. ಶ್ರೀಕೃಷ್ಣ ಆಲನಹಳ್ಳಿ, ಆಲನಹಳ್ಳಿ ಸಮಗ್ರ ಕಥೆಗಳು, ಪು. ೫೧

೬. ಶ್ರೀಕೃಷ್ಣ ಆಲನಹಳ್ಳಿ, ಸಮಗ್ರ ಕಥೆಗಳು, ಪು. ೬೩

೭. ಶ್ರೀಕೃಷ್ಣ ಆಲನಹಳ್ಳಿ, ಗೋಡೆ, ಪು. ೧೧೭

೮. ಶ್ರೀಕೃಷ್ಣ ಆಲನಹಳ್ಳಿ, ಪರಸಂಗದ ಗೆಂಡೆತಿಮ್ಮ, ಪು. ೧೧೩

# ಅಧ್ಯಾಯ ಐದು

## ಸಾಮಾಜಿಕ ಸಂಘರ್ಷಗಳು

ಸಾಮಾಜಿಕ ಸಂಘರ್ಷಗಳು ಯಾವಾಗಲೂ ವ್ಯಕ್ತಿಯು ಮೊದಲಿನಿಂದಲೂ ಉಳಿಸಿಕೊಂಡು ಬಂದಿದ್ದ ಪ್ರತಿಷ್ಠೆ, ಗೌರವ, ಆಸ್ತಿ-ಪಾಸ್ತಿ ಮುಂತಾದವುಗಳಿಗೆ ಧಕ್ಕೆಯುಂಟಾದಾಗ ಉಂಟಾಗುತ್ತವೆ. ಇದು ಒಂದು ಕುಟುಂಬ ಮತ್ತು ಮತ್ತೊಂದು ಕುಟುಂಬದ ನಡುವೆಯೂ ಉದ್ಭವಿಸಬಹುದು. ಜಾತಿ ವ್ಯವಸ್ಥೆಯು ಸಾಮಾಜಿಕ ಸಂಘರ್ಷಕ್ಕೆ ಪ್ರಮುಖವಾದ ಕಾರಣವಾಗಿದೆ. ಏಕೆಂದರೆ ಭಾರತದಲ್ಲಿ ಹಲವಾರು ಜಾತಿ ಧರ್ಮಗಳು ಇರುವುದರಿಂದ ಇವುಗಳು ಯಾವಾಗಲೂ ತಮ್ಮ ಹಿತಾಸಕ್ತಿಗಾಗಿಯೇ ದುಡಿಯುತ್ತಿರುತ್ತವೆ. ಅಂತಹ ಸಂದರ್ಭದಲ್ಲಿ ಇನ್ನೊಂದು ಜಾತಿ ಅಥವಾ ಧರ್ಮದಿಂದ ತೊಂದರೆ ಉಂಟಾದರೆ ಅದು ಒಂದು ಸಮಾಜವನ್ನೇ ಸಂಘರ್ಷಕ್ಕೀಡು ಮಾಡುತ್ತದೆ.

'ಕಾಡು' ಒಂದು ಚಿಕ್ಕ ಹಳ್ಳಿಯ ಬದುಕನ್ನು ಕಟ್ಟಿಕೊಡುವ ಕಾದಂಬರಿ. ಊಳಿಗಮಾನ್ಯ ವ್ಯವಸ್ಥೆಯನ್ನು ಹೊಂದಿರುವ ಹಲವು ಕುಟುಂಬಗಳು ಮತ್ತು ಅವುಗಳ ಅಡಿಯಲ್ಲೇ ತಮ್ಮ ಬದುಕನ್ನು ಕಾಣುತ್ತಿರುವ ಇತರ ಕೆಲವು ದಲಿತ ಕುಟುಂಬಗಳನ್ನು ಕಾಣುತ್ತೇವೆ. ಇದು ಮೊದಲು ಪ್ರಶಾಂತವಾದ ಹಳ್ಳಿಯಾಗಿದ್ದು ನಂತರ ಗದ್ದಲದ ವಾತಾವರಣ ನಿರ್ಮಾಣವಾಗುತ್ತದೆ. ಕೃಷಿ ಚಟುವಟಿಕೆ ಹೊಂದಿರುವುದು ಈ ಹಳ್ಳಿಗಳ ಸಾಮಾನ್ಯ ಬದುಕು. ಈ ಕಾದಂಬರಿಯಲ್ಲಿ ಎರಡು ಹಳ್ಳಿಗಳು ಬರುತ್ತವೆ. ಒಂದು ಕೊಪ್ಪಲು ಮತ್ತೊಂದು ಹೊಸೂರು ಈ ಎರಡೂ ಮೊದಲು ಒಂದೇ ಊರಾಗಿದ್ದವು.

ಸಾಂಪ್ರದಾಯಿಕವಾಗಿ ತನ್ನ ಶ್ರೀಮಂತಿಕೆ ಮತ್ತು ಹಳೆಯ ಯಜಮಾನಿಕೆಯನ್ನು ಉಳಿಸಿಕೊಂಡು ಬಂದಿರುವ ಪ್ರತಿಷ್ಠಿತ ರೈತನಾದ ಕೊಪ್ಪಲಿನ ಚಂದ್ರೇಗೌಡರು ಊರಿನ ಪ್ರತಿಷ್ಠಿತರಲ್ಲಿ ಒಬ್ಬರಾಗಿದ್ದು ಪಂಚಾಯ್ತಿ ಸದಸ್ಯನಾಗಿಯೂ, ನ್ಯಾಯ ಹೇಳುವ ವ್ಯಕ್ತಿಯಾಗಿಯೂ ಕಂಡುಬರುತ್ತಾನೆ. ಕೊಪ್ಪಲಿನ ನ್ಯಾಯವೆಂದರೆ ಸುತ್ತಲಿನ ಎಲ್ಲಾ ಹಳ್ಳಿಗಳಿಗೂ ಹೆಸರುವಾಸಿಯಾದದ್ದು. ಕೆಂಚ ಮತ್ತು ದೇವಿಯರ ಅನೈತಿಕ ಸಂಬಂಧದ ಪಂಚಾಯ್ತಿ ನಡೆಯುವಾಗ ಚಂದ್ರೇಗೌಡ ಕೆಂಚನನ್ನು ಹೀನಾಯ ಬೈಯುವುದರಿಂದ "ಬುಡಯ್ಯ ನಾನೇನು ನಿಮ್ಮ ಹಟ್ಟಿಗೆ ಬಂದಿತ್ತಿಲ್ಲ" ಎನ್ನುತ್ತಾನೆ. ಇದರಿಂದ ಚಂದ್ರೇಗೌಡ ಕೆಂಚನನ್ನು ಸಾಯಬೀಳ ಹೊಡೆಯುತ್ತಾನೆ. ಇದು ಹೊಸೂರಿನಿಂದ ಬಂದಿದ್ದ ಕೆಂಚನ ಸಾಹುಕಾರನಾದ ಶಿವಗಂಗ ಮತ್ತು ಕಡೆಮನೆ ಪುಟ್ಟಸ್ವಾಮಿಗೆ ಸಿಟ್ಟುಬರುತ್ತದೆ. ಇಲ್ಲಿ ಹಿರಿಯರೆಂದು ಸೇರಿದವರೆಲ್ಲಾ ಒಂದಿಲ್ಲೊಂದು ವಿಷಯದಲ್ಲಿ ತಪ್ಪು ಮಾಡಿದವರಾದರೂ ಯಾರೂ ಅದನ್ನು ತಪ್ಪು ಎಂದು ಒಪ್ಪಿಕೊಳ್ಳದವರಾಗಿರುತ್ತಾರೆ. ಚಂದ್ರೇಗೌಡನೂ ಇಂತಹದ್ದೆ ಒಂದು ಅನೈತಿಕ ಸಂಬಂಧವನ್ನು ಹೊಂದಿರುತ್ತಾನೆ. ಅಯ್ನೋರು ಇದರಿಂದ ಹೊರತಾಗಿರುವುದಿಲ್ಲ. ಹೀಗಿದ್ದರೂ ತಮ್ಮ ಪ್ರತಿಷ್ಠೆ, ಸ್ಥಾನಮಾನ, ಗೌರವ, ಮರ್ಯಾದೆಗಾಗಿ ಕೆಂಚನಂತಹವರ ಮೇಲೆ ದೌರ್ಜನ್ಯವನ್ನು ಮಾಡುತ್ತಾರೆ. ಆದ್ದರಿಂದಲೇ ಕೆಂಚನಿಗೆ

ಇಪ್ಪತ್ತು ರೂಪಾಯಿ ತಪ್ಪು ದಂಡ ಕಟ್ಟಬೇಕಾಗುತ್ತದೆ. ಇಲ್ಲಿಂದ ನಡೆಯುವ ಮಾತಿನಿಂದ ಗಲಾಟೆ ಪ್ರಾರಂಭವಾಗಿ ಕೊಪ್ಪಲು ಮತ್ತು ಹೊಸೂರಿನ ನಡುವೆ ದ್ವೇಷ ಉಂಟಾಗುತ್ತದೆ. ಶಿವಗಂಗ ಇವರ ತೀರ್ಪನ್ನು ಪ್ರಶ್ನಿಸುತ್ತಾನೆ. ಇದು ತಲೆ ತಲಾಂತರದಿಂದ ಉಳಿಸಿಕೊಂಡು ಬಂದಿದ್ದ ಗೌರವಕ್ಕೆ ದಕ್ಕೆಯಾದಂತೆ ಇವನ ಮೇಲೂ ಚಂದ್ರೇಗೌಡ ಜಗಳಕ್ಕಿಳಿಯುತ್ತಾನೆ. ಶಿವಗಂಗ "ಬಂಡ ಸೂಳೆಮಕ್ಕಳು ಗಂಡ ಸತ್ತ ಮುಂಡೇರದನ್ನೆಲ್ಲ ತಿನ್ನದು ಯಾರ್ಗೂ ಗೊತ್ತಿಲ್ಲ. ಎಂದಾಗ ಚಂದ್ರೇಗೌಡ ಇವನಿಗೂ ನಾಲ್ಕು ಬಾರಿಸುತ್ತಾನೆ. ಇದರಿಂದ ಶಿವಗಂಗ ಮಾಡ್ತಿನಿ ಮಕ್ಕಳಿಗೆ ನಾ ಯಾರು ಅಂತ ತೋರಿಸ್ತೀನಿ" ಎಂದು ಹೇಳುವುದು ಆ ಊರಿನಲ್ಲಿ ಆದ ಅವಮಾನವನ್ನು ಸಹಿಸದವನಾಗಿ ತನ್ನ ಗೌರವಕ್ಕುಂಟಾದ ಚ್ಯುತಿಯಿಂದ ಸೇಡನ್ನು ಇಡುತ್ತಾನೆ. ಹಳ್ಳಿಗಳಲ್ಲಿ ನಡೆಯುವ ಈ ರೀತಿಯ ಎಲ್ಲಾ ಜಗಳಗಳಿಗೂ ಪರಸ್ಪರ ದ್ವೇಷ, ತಮ್ಮ ಮರ್ಯಾದೆ, ಊರಿನ ಮರ್ಯಾದೆ ಗೌರವವನ್ನು ಕಾಪಾಡಿಕೊಂಡು ಬರುವುದರ ಜೊತೆಗೆ ತಮ್ಮ ಪ್ರತಿಷ್ಠೆಯನ್ನು ಮುಂದುವರಿಸಿಕೊಂಡು ಹೋಗುವುದಾಗಿರುತ್ತದೆ.

ನವೋದಯ ಸಾಹಿತ್ಯವನ್ನು ಗಮನಿಸಿದಾಗ ಶ್ರೇಣೀಕರಣಗೊಂಡಿರುವ ಈ ಸಮಾಜದಲ್ಲಿ ದಲಿತರು ದಬ್ಬಾಳಿಕೆಗೆ ಒಳಗಾಗಿದ್ದಾರೆ. ಊಳಿಗಮಾನ್ಯ ವ್ಯವಸ್ಥೆ ಅವರನ್ನು ಮೊದಲಿನಿಂದಲೂ ತನ್ನ ಹಿಡಿತದಲ್ಲಿ ಇಟ್ಟುಕೊಂಡಿದೆ. ಇದನ್ನು ಉಲ್ಲಂಘಿಸಲು ಶತಮಾನಗಳಿಂದಲೂ ಸಾಧ್ಯವಾಗಿಲ್ಲ. ಇವರನ್ನು ಪ್ರಾಣಿಗಳಂತೆ ನಡೆಸಿಕೊಳ್ಳುವುದು ಎದ್ದು ಕಾಣುತ್ತದೆ. ಇವರನ್ನು ತಮ್ಮ ವಸ್ತುಗಳಂತೆ ಬೇಕಾದಾಗ ಬದಲಾಯಿಸುವುದೂ ಇವರಲ್ಲಿದೆ. ಕೆಲವು ನವ್ಯ ಕಾದಂಬರಿಗಳ ಊಳಿಗಮಾನ್ಯ ಸಮಾಜದಲ್ಲಿಯೂ ಇದು ಕಂಡುಬರುತ್ತದೆ.

ಹೊಸೂರಿನ ಸರಹದ್ದಿಗೆ ಸೇರಿದ ಈಡಿಗರ ಕೊಂಡಯ್ಯನ ಮೂಲೆಕೆರೆ ಹೊಲದ ವಿಚಾರದಲ್ಲಿ ಇವರಿಬ್ಬರಿಗೂ ಮನಸ್ತಾಪವಾಗಿರುತ್ತದೆ. ಶಿವಗಂಗನ ಹೊಲಕ್ಕೆ ಹಂದಿಕೊಂಡಿರುವ ಈ ಆಸ್ತಿಯನ್ನು ತಾನೇ ಕೊಳ್ಳಬೇಕೆಂದುಕೊಂಡರೂ ಕೊಂಡಯ್ಯ ಚಂದ್ರೇಗೌಡನಿಗೆ ಕ್ರಯ ಮಾಡಿಕೊಟ್ಟಿರುತ್ತಾನೆ. ಹೊಸೂರಿನ ಆಸ್ತಿಯನ್ನು ನಾವೇ ಉಳಿಸಿಕೊಳ್ಳಬೇಕೆಂದು ಪ್ರಯತ್ನಪಟ್ಟರೂ ಅದು ಸಾಧ್ಯವಾಗುವುದಿಲ್ಲ. ಹೊಸೂರಿನ ಆಸ್ತಿಯ ಜೊತೆಗೆ ಊರಿನ ಬಸಕ್ಕನ ಜೊತೆ ಸಂಬಂಧವನ್ನು ಹೊಂದಿದ್ದುದೇ ಶಿವಗಂಗನಿಗೆ ಚಂದ್ರೇಗೌಡನ ಬಗ್ಗೆ ದ್ವೇಷವುಂಟಾಗಲು ಕಾರಣವಾಗಿರುತ್ತದೆ. ಸಮಾಜದಲ್ಲಿ ಉಂಟಾಗುವ ಕಲಹಗಳಿಗೆ ಈ ಆಸ್ತಿ ಮತ್ತು ಹೆಣ್ಣಿನ ವಿಚಾರ, ಊರಿನ ವಿಚಾರ, ಊರಿನ ಮತ್ತು ಊರಿನ ಜನರ ಮರ್ಯಾದೆಯ ವಿಷಯಗಳೇ ಪ್ರಮುಖ ಕಾರಣವಾಗಿರುತ್ತವೆ. 'ಗೋಡೆ' ಕಾದಂಬರಿಯ ದೊಡ್ಡಮನೆ ಮಾಸ್ತಿಗೌಡನಿಗೂ ಮತ್ತು ಹೊಸಮನೆ ಕೆಂಪೇಗೌಡನಿಗೂ ಇದೇ ರೀತಿಯ ದ್ವೇಷ ಇರುತ್ತದೆ. ಆದರೆ ಮಾಸ್ತಿಗೌಡ ಕೆಂಪೇಗೌಡನ ಮೇಲೆ ದ್ವೇಷ, ಜಗಳ, ಹೊಡೆದಾಟ ಮುಂತಾದವುಗಳ ಬಗ್ಗೆ ಯೋಚಿಸುವುದಿಲ್ಲ. ಆದರೆ ಕೆಂಪೇಗೌಡ ಮಾತ್ರ ಈ ದೊಡ್ಡಮನೆಯವರು ತಲೆತಲಾಂತರದಿಂದ ಉಳಿಸಿಕೊಂಡು ಬಂದಿದ್ದ ಮನೆತನದ ಗೌರವವನ್ನು, ಮನೆಯ ಆಸ್ತಿಯನ್ನು ಹೇಗಾದರೂ ಮಾಡಿ ಹಾಳುಮಾಡಿಸಿ ಕೆಟ್ಟ ಹೆಸರು ಬರುವಂತೆ ಒಳಗೇ ಮಸಲತ್ತು ನಡೆಸಿರುತ್ತಾನೆ. ಆದ್ದರಿಂದಲೇ ದೊಡ್ಡಮನೆ ಭಾಗವಾದ ಮೇಲೆ ತಾಯವ್ವನಿಗೆ ಸಹಾಯ ಮಾಡುವ ನೆಪದಲ್ಲಿ ಅವಳ ಜೊತೆ ಮಾತುಕತೆ ಪ್ರಾರಂಭಿಸುತ್ತಾನೆ. ಇವನಿಗೆ ದೊಡ್ಡಮನೆಯ ಯಾರಮೇಲೂ ದ್ವೇಷವಿಲ್ಲದೇ ಇದ್ದರೂ ಆ ದೊಡ್ಡಮನೆಯ ಗೌರವವನ್ನು ಕೆಡಿಸಬೇಕೆಂದಿರುತ್ತಾನೆ. ಇದಕ್ಕೆ ಕಾರಣ ಇವನು ಅಷ್ಟೇ ದೊಡ್ಡ ಹೊಸಮನೆ ಕಟ್ಟಿಸಿದರೂ ಯಾರೂ ಇವನ ಬಗ್ಗೆ ಮಾತಾಡುವುದಿಲ್ಲ. ಪಕ್ಕದ ಊರಿನ ಜನರೂ ದೊಡ್ಡಮನೆ ವಿಷಯವನ್ನು ಕೇಳಿ ವಿಚಾರಿಸುವುದು ಇವನಿಗೆ ಆ ಮನೆಯ ಹೆಸರಿನ ಮೇಲೆ ದ್ವೇಷ ಇರುತ್ತದೆ. ಇವನು ಕಂಟ್ರಾಟುದಾರನಾದರೂ ಶ್ರೀಮಂತನಾದರೂ ಊರಿನಲ್ಲಿ ಚಂದ್ರೇಗೌಡನಿಗೇ ಎಲ್ಲದರಲ್ಲೂ ಮೊದಲ ಪ್ರಾಶಸ್ತ್ಯ. ಇದು ಇವನಿಗೆ ಹಿಡಿಸಲಾರದ ಸಂಗತಿಯಾಗಿರುತ್ತದೆ.

ತನ್ನೂರಿನಲ್ಲಿ ಸ್ಥಾನಮಾನಗಳನ್ನು ಪಡೆದುಕೊಳ್ಳಲು ಗೌರವ ಸಂಪಾದಿಸಲು ತನ್ನನ್ನು ತನ್ನ ಶ್ರೀಮಂತಿಕೆಯನ್ನು ಎಲ್ಲರೂ ಕೊಂಡಾಡುವಂತೆ ಮಾಡಬೇಕೆಂದು ಮನುಷ್ಯ ಹಲವಾರು ಕೆಲಸಗಳನ್ನು ಕೈಗೊಳ್ಳುತ್ತಾನೆ. ಅಂತಹದ್ದನ್ನು

ಚಂದ್ರೇಗೌಡನೂ ಮಾಡುತ್ತಾನೆ. ಹೊಸೂರಿನ ಜನಗಳೊಂದಿಗೆ ಜಗಳವಾದ ಮೇಲೆ ಕೊಪ್ಪಲಲ್ಲಿ ನಾಟಕವಾಡಲು ಪ್ರಾರಂಭಿಸುತ್ತಾರೆ. ಚಂದ್ರೇಗೌಡ "ಮಕ್ಕಳು ಇನ್ನೂ ನಾನು ಯಾರಂತ ತಿಳ್ಕಂಡಿರಲಿಲ್ಲ, ಹೋಗ್ಲಿ ನಾಟಕ ಚೆನ್ನಾಗಿ ಕಲ್ತಿದ್ದೀರಿ ತಾನೆ, ಮೊನ್ನೆ ನಾಟಕ ಕಲ್ಸೋನು ಬಂದಿದ್ದ ಯಾರ್ಲ ಅವನು ಸೂರ್ಪನಕಿ ಪಾರ್ಟು ಮಾಡಿರೋನು ಸರಿಯಾಗಿ ಬರದೆ ಇಲ್ವಂತೆ ಸರಿಯಾಗಿ ಕಲ್ತು ಕೊಪ್ಪಲ ಹೆಸರು ಉಳಿಸಬೇಕು ಬೇಕಾದ್ರೆ ಮಂಡ್ಯದ ದಿರಿಸನೆ ತರ್ಸದಂತೆ"[೧] ಎಂದು ಊರಿನ ಜನಗಳಿಗೆ ಹುರುಪು ತುಂಬುತ್ತಾನೆ. ಇದು ತನ್ನೂರು ಮತ್ತು ತನ್ನ ಮುಂದಾಳತ್ವ ಮುಂತಾದವು ಎಲ್ಲರಿಗೂ ತಿಳಿಯಲಿ ತನ್ನ ಗೌರವ ಹೆಚ್ಚಲಿ ಎಂಬುದರ ಉದ್ದೇಶವೇ ಆಗಿದೆ. ಪ್ರತಿಯೊಂದಕ್ಕೂ ಈ ರೀತಿ ಸಾಮಾಜಿಕ ಕೆಲಸವನ್ನು ಮಾಡುವಾಗಲೂ ಸ್ವಾರ್ಥ ಸ್ವಲ್ಪ ಇದ್ದೇ ಇರುತ್ತದೆ ಎಂಬುದಕ್ಕೆ ಕೆಂಪೇಗೌಡನು ತನ್ನ ಮುಂದಾಳತ್ವದಲ್ಲಿ ಸೂಲೇ ದೇವರರ ಗುಡಿ ಜಾತ್ರೆ ಮಾಡಲು ಮುಂದಾಗುವುದು. ಅದಕ್ಕಾಗಿಯೇ ಅತೀ ಶೀಘ್ರದಲ್ಲಿ ಎಲ್ಲಾ ಕೆಲಸಗಳನ್ನೂ ಮಾಡುತ್ತಿರುತ್ತಾನೆ. ಪ್ರತಿಸಲದಂತೆ ಈ ಸಲವೂ ಇರದೇ ವಿಶೇಷವಿರಬೇಕೆಂದು ಮಂತ್ರಿಯನ್ನೇ ಮುಖ್ಯ ಅತಿಥಿಯನ್ನಾಗಿ ಆಹ್ವಾನಿಸಿ ಅವನಿಂದ ಊರಿನ ಕೆಲಸಗಳನ್ನು ಮಾಡಿಸಿ ತನ್ನ ಹೆಸರನ್ನು ಹೆಚ್ಚಿಸಿಕೊಳ್ಳಬೇಕೆಂದು ಯೋಚಿಸಿರುತ್ತಾನೆ. ಆದರೆ ಊರಿನ ಪ್ರಮುಖರಿಗೆ ಇದು ಇಷ್ಟವಾಗುವುದಿಲ್ಲ. "ಮಾಡ್ಲಿ ಸುಮ್ಮಿರಿ ಅವನೇನು ಮಾಡಿದ್ರೂ ಮೊದಲ ಪೂಜೆ ನಿಮ್ದು ತಾನೆ ಈ ಮನೆಗೆ ಎರಡು ಬಗೆದರೆ ದೇವರು ಸುಮ್ಮನೆ ಬಿಟ್ಬಾನೆಯೇ? ಸೂಲೆದೇವರು ಎಂದರೆ ಏನು ಅಂತ ಇವರಿಗೆಲ್ಲ ಏನು ಗೊತ್ತು? ಜಾತ್ರೆ ಬರಲಿ ಜಾತ್ರೆ ದಿನ ದೇವರನ್ನು ಕರೆಸುತ್ತಾರಲ್ಲ, ಕರಸಲಿ ಆಗ ದೇವರ ಮುಂದೆ ಇವರ ಮಸಲತ್ತು ಬಯಲಾಗೇ ಆಗುತ್ತೆ"[೨] ಎಂದು ಕೊಳ್ಳುತ್ತಾರೆ. ಮಸಲತ್ತು ಮಾಡಿ ಊರಿನ ಪ್ರಮುಖನ ಸ್ಥೈರ್ಯವನ್ನು ಕುಗ್ಗುವಂತೆ ಮಾಡುವುದು ಅವನು ಕಂಗಾಲಾಗುವುದನ್ನು ಕಾಣಲು ಹಲವು ಪ್ರಯತ್ನಗಳನ್ನು ಮಾಡುವಂತೆ ಚಂದ್ರೇಗೌಡನ ಮನೆಮುಂದಿನ ಕಣದ ರಾಗಿ ಮೆದೆಗಳಿಗೆ ಬೆಂಕಿ ಹಾಕಿರುತ್ತಾರೆ. ಇದೆಲ್ಲ ಯಾರ ಕೈವಾಡ ಎಂದು ಗೊತ್ತಿದ್ದರೂ ಚಂದ್ರೇಗೌಡ ಯಾವುದೇ ಮಾತನಾಡದೆ ಅದರ ತಲೆಕೆಡಿಸಿಕೊಳ್ಳದೇ ಓಡಾಡುತ್ತಾನೆ. ಚಂದ್ರೇಗೌಡ ಇದನ್ನು ಮೌನವಾಗಿಯೇ ಸಹಿಸಿಕೊಳ್ಳುತ್ತಾನೆ. ಇದು ಅವನ ಒಳಗಿರುವ ಕೋಪ, ಕಿಚ್ಚು, ಕ್ರೌರ್ಯವನ್ನು ಪರೋಕ್ಷವಾಗಿಯೇ ಬಿಂಬಿಸುತ್ತದೆ. ಊರಿನ ಜನ ಹೊಲೇರ ಕೇರಿಗೆ ಬೆಂಕಿ ಬಿದ್ದಾಗ ಒಟ್ಟುಗೂಡಿ ಕೆಡಿಸಿದ್ದರೂ ಇಂದು ಸುಮ್ಮನಾಗಿರುತ್ತಾರೆ. ಆದರೂ ಚಂದ್ರೇಗೌಡನದೇ ಮೊದಲ ಪೂಜೆಯಾಗಬೇಕೆಂದು ಹಠ ಹಿಡಿಯುತ್ತಾರೆ. ಇದು ಊರಿನ ಜನಗಳ ಇಬ್ಬಂದಿತನವನ್ನು ಸೂಚಿಸುತ್ತದೆ. ಇದರಿಂದ ತಿಳಿಯುವುದೆಂದರೆ ಊರಿನ ಕೆಲವು ಜನಗಳಿಗೆ ಚಂದ್ರೇಗೌಡನ ಬಗ್ಗೆ ಒಳ್ಳೆಯ ಅಭಿಪ್ರಾಯವಿಲ್ಲ ಎಂಬುದನ್ನು ಸೂಚಿಸುತ್ತದೆ. ಆದರೂ ಅವನ ಸಿಟ್ಟು ಮೊದಲಿನಿಂದಲೂ ಅವನ ಮನೆತನದವರು ನಡೆಸಿಕೊಂಡು ಬಂದಿರುವ ಗೌಡಿಕೆ ಮುಂತಾದವುಗಳಿಂದ ಅವರು ಯಾವುದನ್ನೂ ಪ್ರಶ್ನಿಸದೇ ಮೌನವಾಗಿರುವುದನ್ನೇ ನೋಡಬಹುದು.

'ಮುಸ್ಸಂಜೆಯ ಕಥಾಪ್ರಸಂಗ'ದಲ್ಲಿ ಬರುವ ಬಸಣ್ಣನೂ ಚಂದ್ರೇಗೌಡನ ಸ್ವಭಾವದವನಾಗಿದ್ದಾನೆ. ಇವನಿಗೂ ಮಕ್ಕಳಿರುವುದಿಲ್ಲ. ಎರಡನೇ ಸಂಬಂಧ ಎಲ್ಲವೂ ಇದ್ದು ಇವನು ಊರಿನ ಪ್ರಮುಖನಾಗಿದ್ದು ಒಬ್ಬ ಸ್ತ್ರೀಯೊಂದಿಗೆ ಸಂಘರ್ಷಕ್ಕೆ ಇಳಿಯುತ್ತಾನೆ. ಬಸಣ್ಣನದು ಒಂದು ರೀತಿಯಲ್ಲಿ ಸ್ವಾರ್ಥದಿಂದ ಕೂಡಿದ್ದಾಗಿರುತ್ತದೆ. ತಾನು ಹೆಚ್ಚು ಹಣಬಡ್ಡಿಯನ್ನು ಹಿಂತಿರುಗಿಸಬೇಕೆಂಬುದೇ ಪ್ರಮುಖ ವಿಷಯವಾಗಿರುತ್ತದೆ. ಆದರೆ ಚಂದ್ರೇಗೌಡನಿಗೆ ಇದೆಲ್ಲಾ ಲೆಕ್ಕವಿಲ್ಲ. ಇವನಿಗೆ ತನ್ನ ಮರ್ಯಾದೆ ಹತ್ತೂರಲ್ಲಿ ಎಲ್ಲರೂ ಕೊಂಡಾಡಬೇಕು ತನಗೆ ಎಲ್ಲರೂ ಗೌರವ ನೀಡಬೇಕು ಎಂಬುದಾಗಿರುತ್ತದೆ. ಆದ್ದರಿಂದಲೇ ನಾಟಕದ ಖರ್ಚನ್ನೆಲ್ಲಾ ನೋಡಿಕೊಳ್ಳುತ್ತಿರುತ್ತಾನೆ.ಅದೇ ರೀತಿಯಲ್ಲಿಯೇ ತನ್ನ ಸ್ವಾರ್ಥ ಸಾಧನೆಗಾಗಿ ಕೆಂಪೇಗೌಡ ಸೂಲೇದೇವರ ಜಾತ್ರೆಯನ್ನೂ ಅದ್ದೂರಿಯಾಗಿ ತನ್ನ ಸ್ವಂತ ಖರ್ಚಿನಲ್ಲೇ ಮಾಡುತ್ತಾನೆ. ಬುಜಂಗಯ್ಯನೂ ಹೋಟೆಲ್ ಪ್ರಾರಂಭವಾಗಿ ತನ್ನೂರಿನ ಲಿಂಗಾಯಿತರ ಆಕ್ರೋಶಕ್ಕೆ ಒಳಗಾಗಿದ್ದರಿಂದ ಮತ್ತೇ ಹಿಂದಿನ ಘನತೆಯನ್ನು ಉಳಿಸಿಕೊಳ್ಳುವ ಸಲುವಾಗಿಯೇ ಮಳೆ ಬರದ

ನೆಪವೊಡ್ಡಿ ಪರ ಮಾಡಲು ಮುಂದಾಗುತ್ತಾನೆ. ಎಷ್ಟೇ ಮಾನಸಿಕವಾಗಿ ನೊಂದಿದ್ದರೂ ಇವನು ಪರಮಾಡುವುದು ಊರಿನ ಅಭ್ಯುದಯಕ್ಕೋ ಅಥವಾ ತನ್ನ ವೈಯಕ್ತಿಕ ಅಭ್ಯುದಯಕ್ಕೋ ಎಂಬುದನ್ನು ನೋಡಿದಾಗ ಈ ಪರ ಬುಜಂಗಯ್ಯನಿಗೇ ಹೆಚ್ಚು ಅನುಕೂಲಕರವಾಗಿರುತ್ತದೆ. ಆದ್ದರಿಂದಲೇ ಮುಂದೆ ನಿಂತು ತನ್ನ ಸ್ವಂತ ಹಣವನ್ನೂ ಖರ್ಚುಮಾಡಿ ಈ ರೀತಿಯ ಕೆಲಸಗಳನ್ನು ಮಾಡಿಸುತ್ತಾರೆ.

ಕೊಪ್ಪಲಿನಲ್ಲಿ ನಾಟಕ ಪ್ರಾರಂಭವಾದಂತೆ ಹೊಸೂರಿನಲ್ಲಿ ಓಕಳಿ ಹಬ್ಬ ಮಾಡಲು ಮುಂದಾಗುತ್ತಾರೆ. ಇವೆರಡೂ ಊರಿನವರು ಪರಸ್ಪರ ತಾವೇನೂ ಕಡಿಮೆಯಲ್ಲ ಎಂದು ತೋರಿಸುವ ಸಮಯವಾಗಿದೆ. ಚಂದ್ರೇಗೌಡ ಓಕಳಿ ಹಬ್ಬಕ್ಕೆ ಹೋಗಲು ಇಷ್ಟಪಡುವುದಿಲ್ಲ. ಆದರೂ ಮೊದಲಿನಿಂದ ಕೊಪ್ಪಲು ಮತ್ತು ಹೊಸೂರುಗಳು ಓಕಳಿ ಆಡುತ್ತಿದ್ದು ಈಗ ಹೋಗಲು ತಪ್ಪಿದರೆ ನಾವು ಸೋತಂತೆಂದು ಪರಿಗಣಿಸಬಹುದಾದ್ದನ್ನು ಯೋಚಿಸಿ ಓಕಳಿಗೆ ಒಪ್ಪುತ್ತಾನೆ. ಅಲ್ಲದೇ ಚಂದ್ರೇಗೌಡನ ಓಕಳಿ ಕಂಚಿನ ಹಂಡೆ ಹತ್ತೂರಲ್ಲಿ ಹೆಸರನ್ನು ಪಡೆದಿರುತ್ತದೆ. ಹೊಸೂರಿನವರು ಈ ಓಕಳಿ ದಿನದಂದು ತಮ್ಮ ವೈಯಕ್ತಿಕ ದ್ವೇಷಕ್ಕೆ ಮನಸ್ಸು ಕೊಟ್ಟಿದ್ದರಿಂದಲೇ ಮತ್ತು ಚಂದ್ರೇಗೌಡ ಅರ್ಥಾತ್ ಕೊಪ್ಪಲಿನ ಸೊಕ್ಕು ಮುರಿಯಲು ಅವಕಾಶಕ್ಕಾಗಿ ಕಾಯುತ್ತಿದ್ದ ಶಿವಗಂಗ ಮತ್ತು ಚೆನ್ನೂರ ಇಬ್ಬರೂ ಮತ್ಸರ ಸಾಧಿಸುತ್ತಾರೆ. ಇದು ಇಡೀ ಈ ಎರಡೂ ಊರನ್ನು ತಲ್ಲಣಗೊಳಿಸುತ್ತದೆ. ಚೆನ್ನೂರ ಚಂದ್ರೇಗೌಡರಿಗೆ ಗಾಯ ಮಾಡುವುದು ಮತ್ತಷ್ಟು ಕ್ರೌರ್ಯಕ್ಕೆ, ಹಿಂಸೆಗೆ ಕಾರಣವಾಗುತ್ತದೆ. ಇಡೀ ಓಕಳಿ ಹಬ್ಬ ರಕ್ತಸಿಕ್ತವಾಗುತ್ತದೆ. ಹೊಸೂರಿನ ಕಡೆಯವರು ತಮ್ಮ ಸೋಲನ್ನು ಒಪ್ಪಿಕೊಳ್ಳುವಂತಾಗುತ್ತದೆ. ಕೊಪ್ಪಲಿನ ಜನ ತಮ್ಮ ದರ್ಪವನ್ನು ತೋರಿಸುವಂತೆ ನಾಟಕವಾಡಲು ಪ್ರಾರಂಭಿಸಿದಾಗ ಸೋಲನ್ನು ಅದರಿಂದಾದ ಅವಮಾನವನ್ನು ಸಹಿಸಲಾರದೆ ಶಿವಗಂಗ ಎಷ್ಟು ಹೇಳಿದರೂ ಕೇಳದೇ ಪೊಲೀಸ್ ಕಂಪ್ಲೇಟ್ ಕೊಡುತ್ತಾನೆ. ಈ ಪೊಲೀಸ್‌ರು ಊರಿಗೆ ಕಾಲಿಡುವುದೇ ಅವಮಾನವೆಂದು ತಿಳಿಯುತ್ತಿದ್ದ ಚಂದ್ರೇಗೌಡ ಈಗ ಅಪರಾಧಿಯಾಗಿ ಪೊಲೀಸರ ಜೊತೆ ನಡೆಯಬೇಕಾಗುತ್ತದೆ. ಚಂದ್ರೇಗೌಡನಿಗೆ ಇದಕ್ಕಿಂತ ಅವಮಾನದ ಸಂಗತಿ ಮತ್ತೊಂದಿಲ್ಲದಂತೆ ಮಾತನಾಡದೇ ಹೊರಡುತ್ತಾನೆ. ಚಂದ್ರೇಗೌಡನಿಗಾದ ಅವಮಾನದಂತೆ ಕೊಪ್ಪಲಿನ ನಾಟಕಕ್ಕೂ ಮಂಡ್ಯದಿಂದ ಬಂದ ದಿರಿಸಿನ ಲಾರಿ ವಾಪಸ್ಸು ಹೋಗುವುದೂ ಆ ಊರಿಗಾದ ಅವಮಾನವೇ ಆಗಿದೆ. ಇದೆಲ್ಲಕ್ಕೂ ಹೊಸೂರಿನ ಜಯದ ಸಂಕೇತಗಳಾಗುವುದಿಲ್ಲ. ಬದಲಾಗಿ ಕೊಪ್ಪಲಿನ ಜನಗಳ ಮೇಲೆ ಇವರ ಮತ್ಸರವೆಷ್ಟು ಎಂಬುದನ್ನೇ ಸೂಚಿಸುತ್ತದೆ. ಒಂದು ಕಾಲಕ್ಕೆ ಇವೆರಡೂ ಒಂದೇ ಊರಾಗಿದ್ದರೂ ತಮ್ಮ ವೈಯಕ್ತಿಕ ದ್ವೇಷ ಇಡೀ ಊರನ್ನೇ ಬೇರೆ ಬೇರೆ ಮಾಡಿ ಎರಡೂ ಊರುಗಳು ದಿಗ್ಭ್ರಮೆಗೊಳಪಡಿಸುತ್ತವೆ.

ಕೊಪ್ಪಲು ಮತ್ತು ಹೊಸೂರು ಒಂದೇ ಊರಾಗಿದ್ದಂತೆ ಒಂದೇ ಊರಿನ ವ್ಯಕ್ತಿಗಳಾಗಿದ್ದ ಮಾಸ್ತಿಗೌಡನ ಅಣ್ಣ ಚನ್ನೇಗೌಡನ ದರ್ಪವನ್ನು ಕಂಡಿದ್ದ ಊರಿನ ಕೆಂಪೇಗೌಡ ಅವನ ಮರಣದ ನಂತರ ಆ ಸ್ಥಾನ ಪಡೆಯಲು ಹಾತೊರೆಯುತ್ತಾನೆ. ಆದ್ದರಿಂದಲೇ ಸೂಲೇದೇವರ ಜಾತ್ರೆಗೆ ಮುಂದಾಗಿ ನಡೆಸುತ್ತಾನೆ. ಇಲ್ಲಿ ಎಲ್ಲವೂ ತನ್ನಂತೆಯೇ ನಡೆಯಬೇಕೆಂದು ಅಂದುಕೊಂಡಂತೆ ಆಗುವುದಿಲ್ಲ. ಕೆಲವೊಂದು ಆಚಾರ-ವಿಚಾರಗಳು ಊರಿನ ಸಂಪ್ರದಾಯಗಳು ಎಷ್ಟೊಂದು ಕಟ್ಟುನಿಟ್ಟಾಗಿರುತ್ತವೆಂದರೆ ಕೆಂಪೇಗೌಡನ ಮಗಳು ಕಳಶ ಹೊತ್ತದ್ದನ್ನು ಕಂಡ ಜನ ''ಕಾಲಾದಿಂದ ಯಂಗೆ ನಡ್ಕಂಡು ಬಂದದೊ ಅಂಗೆ ನಡೀಬೇಕು. ದೊಡ್ಡಗೌಡರ ಮನೆಯಹ್ಮೊಗ ಕಳಶ ವೊತ್ಕಳ್ದೆ ಅದೆಂಗೆ?''[೩] ಎಂದು ಪ್ರಶ್ನಿಸುತ್ತಾರೆ. ಇದರಿಂದ ಇಡೀ ಊರಿನ ಕೆಂಗಣ್ಣಿಗೆ ಗುರಿಯಾಗುತ್ತಾನೆ. ಆಗ ಖುದ್ದಾಗಿ ತಾನೇ ಮಗಳ ತಲೆಯ ಮೇಲಿಂದ ಕಳಶವನ್ನು ಎತ್ತಿ ಸಾಕಿಗೆ ಹೊರಿಸುತ್ತಾನೆ. ಇದು ಕೆಂಪೇಗೌಡನ ಜೀವನದಲ್ಲಿ ಅನುಭವಿಸಿದ ಅವಮಾನವಾಗುತ್ತದೆ. ಸಿಟ್ಟು, ದ್ವೇಷ, ಕೇಡು ಬಗೆಯುವುದು ಮುಂತಾದವುಗಳು ಇಂತಹ ಸಮಾರಂಭಗಳಿಗೆ ಅಡೆತಡೆ ಉಂಟುಮಾಡುತ್ತವೆ ಎಂಬುದನ್ನು ನೋಡುವಂತೆಯೇ ಇಲ್ಲಿಯೂ ತೇರಿಗೆ ಬೆಂಕಿ ಬೀಳುತ್ತದೆ. ಇದು ಜನರ ಮನಸ್ಸಿನಲ್ಲಿ ಮಾಡಬಾರದ್ದನ್ನು ಮಾಡಿದಾಗ ಈ ರೀತಿ ಅನಾಹುತಗಳು ಉಂಟಾಗುತ್ತವೆ ಎಂಬ ಭಾವನೆ

ಬಂದು ಕೆಂಪೇಗೌಡ ಇಡೀ ಊರಿನ ಜನಗಳ ಮಾತಿಗೆ ಗುರಿಯಾಗುತ್ತಾನೆ. 'ಭುಜಂಗಯ್ಯನ ದಶಾವತಾರಗಳು' ಕೃತಿಯಲ್ಲಿ ಬರುವ ಮಾದಳ್ಳಿ ಅಪ್ಪಟ ಕೃಷಿ ಬದುಕಿನೊಂದಿಗೆ ಪ್ರಾರಂಭವಾಗುತ್ತದೆ. ಇಲ್ಲಿ ಪ್ರತಿಯೊಬ್ಬರೂ ಕೃಷಿಕರು ಮತ್ತು ಕೃಷಿಕಾರ್ಮಿಕರೆ. ಈ ಕೃಷಿ ಮಳೆ ನಂಬಿ ಮಾಡುವ ಕೆಲಸ. ಮಳೆ ಬರದೆ ಹೋದರೆ ವಲಸೆ ಹೋಗುವುದೇ ಈ ಜನರಿಗೆ ಬರುವ ಸ್ಥಿತಿ. ಕೃಷಿ ಕಾರ್ಮಿಕರಂತೂ ಹೊಟ್ಟೆಗಿದ್ದರೆ ಬಟ್ಟೆಗಿಲ್ಲ, ಬಟ್ಟೆಗಿದ್ದರೆ ಹೊಟ್ಟೆಗಿಲ್ಲ ಎನ್ನುವಂತ ಸ್ಥಿತಿ. ಇಲ್ಲಿ ಅಂಥಾ ಹೇಳಿಕೊಳ್ಳುವಂತ ವಿದ್ಯಾವಂತರಾರೂ ಇಲ್ಲವಾದರೂ ದೇಶ ಸುತ್ತಿ ಬಂದವನೆಂದರೆ ಭುಜಂಗಯ್ಯ ಒಬ್ಬನೇ. ಈ ಊರು ಶುದ್ಧ ಸಂಪ್ರದಾಯವಾದಿಗಳ ಅಡಿಯಲ್ಲಿ ಅಡಗಿರುತ್ತದೆ. ಇಲ್ಲಿನ ಸಮಾಜದಲ್ಲಿ ಒಕ್ಕಲಿಗರು, ಗೌಡರು, ಲಿಂಗಾಯಿತರು, ದಲಿತರು ಸೌಹಾರ್ದದಿಂದಲೇ ಇರುತ್ತಾರೆ. ಆದರೂ ಊಳಿಗಮಾನ್ಯ ಅಥವಾ ಜಮೀನ್ದಾರಿ ಪದ್ಧತಿ ಎದ್ದುಕಾಣುತ್ತದೆ.

ಸಾಮಾಜಿಕ ಸಂಘರ್ಷಗಳು ಹಲವು ರೂಪದಲ್ಲಿ ಕಂಡುಬರುತ್ತವಾದರೂ ಆಲನಹಳ್ಳಿ ಅವರ ಸಾಹಿತ್ಯದಲ್ಲಿ ಎರಡು ರೂಪದಲ್ಲಿ ಕಂಡುಬರುತ್ತವೆ. ಒಂದು ತಮ್ಮ ವೈಯಕ್ತಿಕ ದ್ವೇಷ, ಸ್ವಾರ್ಥ ಸಾಧನೆಗಾಗಿ ಕಂಡುಬಂದರೆ ಇವುಗಳು ಇಂದಿಗೂ ನಮ್ಮ ಹಳ್ಳಿಗಳಲ್ಲಿ ನಡೆಯುತ್ತವೆ. ಹಾಗು ಮತ್ತೆ ಕೆಲವು ತಮ್ಮ ಸಂಪ್ರದಾಯ ಮತ್ತು ಮಂಡಿವಂತ ಸಂಸ್ಕೃತಿಗೆ ಧಕ್ಕೆ ಉಂಟಾದಾಗ ನಡೆಯುತ್ತವೆ. ಇವೆರಡರಲ್ಲಿಯೂ ಹಿಂಸೆ, ದ್ವೇಷ, ಸ್ವಾರ್ಥ ಇದ್ದರೂ ಅದಕ್ಕೆ ಕಾರಣಗಳು ಮಾತ್ರ ಭಿನ್ನವಾಗಿರುತ್ತವೆ.

ಬುಜಂಗಯ್ಯ ಮೊದಲು ಹೋಟೆಲನ್ನು ಪ್ರಾರಂಭಮಾಡಬೇಕೆಂದು ತನ್ನ ಸ್ನೇಹಿತರನ್ನು ಕೇಳಿದಾಗ "ಅದ್ಯಾಕಣ್ಣ ಈ ದುರ್ಬದ್ದಿ ಬಂತು ನಿಂಗೆ ನಾವು ಶಿವಾಚಾರದವರಾಗಿ ಯಾವ್ಯಾವ ಜಾತಿಯವ್ರೊ, ಬಂದು ಕುಡಿಯೋ ಎಂಜಲು ಲೋಟ ತೊಳಿಬ್ಯಾಕ ಇರೋನೊಬ್ಬ ನೀನು, ನಿಂಗೆ ನಿಮ್ಮಪ್ಪ ಮಡಗಿರೊ ಆಸ್ತೀನೆ ಸಾಕಪ್ಪ"[೪] ಎನ್ನುತ್ತಾರೆ. ಇವರ ಮಾತಿನಿಂದ ಶಿವಾಚಾರದವರು ಹೋಟೆಲ್ ನಡೆಸುವುದು ದುರ್ಬುದ್ದಿಯಂತೆ ಕಂಡುಬರುತ್ತದೆ. ಇದು ಬರೀ ಶಿವಾಚಾರದವರಿಗೆ ಮಾತ್ರವಾಗಿರದೆ ಇಡೀ ಊರಿಗೆ ಹೋಟೆಲ್ ಆಗಿದ್ದು ಇದರಿಂದ ಉಂಟಾಗುವ ಲಾಭದ ಬಗ್ಗೆ ಅಷ್ಟಾಗಿ ತಿಳುವಳಿಕೆ ಇಲ್ಲದೇ ಕೇವಲ ಶಿವಾಚಾರದವರ ಮಡಿವಂತಿಕೆ ಮಾತ್ರ ಕಂಡುಬರುತ್ತದೆ. ಇದರಿಂದ ಈ ಊರಿನಲ್ಲಿ ನಡೆಯುವ ಜಾತೀಯತೆ ಕಂಡುಬರುತ್ತದೆ. ಆದ್ದರಿಂದಲೇ ಶೂದ್ರ ಮತ್ತು ದಲಿತರಿಗಾಗಿಯೇ ಅದರಲ್ಲಿಯೂ ಎಡಗೈ, ಬಲಗೈನವರಿಗೆ ಬೇರೆ ಬೇರೆ ಲೋಟ ಇಟ್ಟಿರುತ್ತಾರೆ. ಈ ಜಾತೀಯತೆಯೇ ಮುಂದೆ ಇಡೀ ಊರೇ ಹೆದರುವಂತಹ ಘಟನೆಗೆ ನಾಂದಿಯಾಗುತ್ತದೆ. ಆದರೇ ಪರಸಂಗದ ಗೆಂಡೆತಿಮ್ಮ ಕಾದಂಬರಿಯಲ್ಲಿ ಈ ಜಾತೀಯತೆಯ ಕಾರಣವಲ್ಲದೆ ಆಧುನಿಕ ವಸ್ತುಗಳನ್ನು ಬಳಸುವುದು ಸಂಘರ್ಷಕ್ಕೆ ಕಾರಣವಾಗುತ್ತದೆ. ತಮ್ಮ ಸಾಂಪ್ರದಾಯಿಕ ಉಡುಗೆ ತೊಡುಗೆ ಮತ್ತು ಅಲಂಕಾರವನ್ನು ಈ ಜನರು ಮೀರುತ್ತಾರೆ. ಇದಕ್ಕೆ ಕಾರಣವಾಗಿ ನಿಲ್ಲುವವನು ಅಮಾಯಕನಾದ ಗೆಂಡೆತಿಮ್ಮ. ಇಲ್ಲಿಯೂ ಪರಿವಾರದವರು ಒಕ್ಕಲಿಗರು, ಲಿಂಗಾಯತರು ಮುಂತಾದ ಜಾತಿಗಳು ಕಂಡುಬಂದರೂ ಇವರ ನಡುವೆ ಸಂಘರ್ಷ ಕಡಿಮೆ. ಭಾರತದಲ್ಲಿ ಸಾಂಪ್ರದಾಯಿಕವಾಗಿ ನಡೆದು ಬಂದದ್ದು ಶ್ರೇಣೀಕರಣ ವ್ಯವಸ್ಥೆಯೆಂಬುದನ್ನು ಇಂದಿಗೂ ನೋಡುತ್ತೇವೆ. ಸಾಮಾಜಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ ನಾವು ಶೂದ್ರರನ್ನು ಮತ್ತು ದಲಿತರನ್ನು ಇಂದಿಗೂ ದೂರ ಇಟ್ಟಿದ್ದೇವೆ. ಆದರೂ ಗಾಂಧೀಜಿಯಂತ ಚಿಂತಕರು ದಲಿತರ ಮನೆಗಳಿಗೆ ಹೋಗಿ ಒಂದು ಸಾಮಾಜಿಕ ಕ್ರಾಂತಿ ಮಾಡುತ್ತಾರೆ, ಬಸವಣ್ಣನಂತಹವರು ಅಂತರ್‌ಜಾತಿ ವಿವಾಹವನ್ನು ಮಾಡಿ ತಮ್ಮ ಸಂಪ್ರದಾಯವನ್ನು ಮುರಿಯುತ್ತಾರೆ. ಅಂತದೊಂದು ಘಟನೆಯನ್ನು ಭುಜಂಗಯ್ಯನು ಮಾಡಿ ಮಹಾವ್ಯಕ್ತಿಗಳ ಸಾಲಿನಲ್ಲಿ ನಿಲ್ಲುತ್ತಾನೆ.

ಬುಜಂಗಯ್ಯನ ಹೋಟೆಲಿಗೆ ಎಲ್ಲಾ ಜಾತಿಯವರು ಬರುತ್ತಿದ್ದರು. ಇದೇ ಊರಿನ ಮೇಷ್ಟ್ರು ಹೊಲೆಯನಾಗಿದ್ದರೂ ಶುಭ್ರವಾದ ಬಿಳಿಬಟ್ಟೆಯನ್ನು ತೊಟ್ಟಿರುತ್ತಾನೆ. ಇತರ ಸವರ್ಣೀಯರಿಗಿಂತಲೂ ಸ್ವಚ್ಛವಾಗಿದ್ದರೂ ಬುಜಂಗಯ್ಯನ ಅಭಿವೃದ್ಧಿಯನ್ನು ಸಹಿಸಲಾರದ ಊರಿನ ಕೆಲವು ಮಡಿವಂತ ಲಿಂಗಾಯತ

ಕುತಂತ್ರ ಜನರು ಬುಜಂಗಯ್ಯನೊಂದಿಗೆ ಜಗಳಕ್ಕಿಳಿಯುತ್ತಾರೆ. ಪಟ್ಟಭದ್ರ ಹಿತಾಸಕ್ತಿಯನ್ನುಳ್ಳ ಜನರಲ್ಲಿ ರುದ್ರಪ್ಪ ಬುಜಂಗಯ್ಯನ ಅಭ್ಯುದಯವನ್ನು ಸಹಿಸದ ಮೊದಲ ವ್ಯಕ್ತಿಯಾಗಿದ್ದಾನೆ. “ನಿನ್ನೋಟ್ಲಲ್ಲಿ ವೊಲೇರ್ನೆಲ್ಲ ವಳೀಕೆ ಕರ್ಕಂಡು ಅವ್ರು ತಿಂದಿದ್ರಲ್ಲೆ ಉತ್ತಮ್ರುಗೂ ತಿಂಡಿಕೊಟ್ಕಂತೆ?”[೩] ಎಂದು ಪ್ರಶ್ನೆ ಮಾಡುತ್ತಾನೆ. ಮೊದಲಿನಿಂದಲೂ ಇಂತಹ ಚುಚ್ಚು ಮಾತುಗಳನ್ನು ಕೇಳುತ್ತಿದ್ದ ಇವನು ಇಂದು ಅದೆಲ್ಲವನ್ನೂ ವರ್ಗಾಯಿಸುವಂತೆ “ಓಹೋ ವೋಟ್ಲು ನಿಮ್ಮಪ್ಪ ಇಟ್ಕೊಟ್ಟಿದ್ದ ಅಂತ ತಿಳ್ಕಂಡು ಮಾತಾಡ್ತಾ ಇರಂಗದೆ? ನಾನೂ ಕಂಡಿವ್ನೆ ಮುಚ್ಕಂಡೋಗ್ನಲೆ.”[೪] ಎಂದಾಗ ಅಲ್ಲಿಂದ ರುದ್ರಪ್ಪನ ಕಡೆಯವರು ಹೋಟೆಲ್ಲನ್ನು ಹಾಳುಮಾಡಿ ಬುಜಂಗಯ್ಯನಿಗೆ ನಾಲ್ಕು ತದುಕುತ್ತಾರೆ. ಇಲ್ಲಿ ರುದ್ರನಿಗಾದ ಅವಮಾನವೆಂದರೆ ಊರಿನ ಮುಖ್ಯಸ್ಥನಿಗೆ ಹಿರಿಯನಾದ, ನ್ಯಾಯ ಪಂಚಾಯ್ತಿ ಮಾಡುವ ನನಗೆ ಇಷ್ಟು ಜನರ ಎದುರು ಎದುರಾಡುತ್ತಾನೆ ಎನ್ನುವುದು. ಚಂದ್ರೇಗೌಡನೂ ಇದೇ ರೀತಿ ಕೆಂಚ ಎದುರಾಡಿದ್ದರಿಂದಲೇ ಅವನೂ ಸಿಟ್ಟಿಗೆದ್ದು ಕೆಂಚನನ್ನು ಸಾಯಬೀಳ ಹೊಡೆಯುತ್ತಾನೆ. ಕೆಂಚನ ಸ್ಥಿತಿಯೋ ಬುಜಂಗಯ್ಯನಿಗೂ ಬರುತ್ತದೆ. ಆದರೇ ಗೆಂಡೆತಿಮ್ಮ ಯಾವುದನ್ನೂ ಪ್ರತಿಭಟಿಸದೆ ಇದ್ದರೂ ಇವನ ಅಸಹಾಯಕತೆಯನ್ನು ಕಂಡು ಕೆಂಗಣ್ಣ ಗೆಂಡೆತಿಮ್ಮನ ಕಡೆ ನುಗ್ಗಿ, ಅವನ ಕಳ್ಳು ಬಾಯಿಗೆ ಬರುವಂತೆ ಒದ್ದುಬಿಡುತ್ತಾನೆ. ಕೆಂಚನ ತಪ್ಪಿಗಿಂತಲೂ ಬುಜಂಗಯ್ಯನದು ಭಿನ್ನವಾಗಿದೆ. ಇವರಿಬ್ಬರ ಸ್ಥಿತಿಗಿಂತಲೂ ಭಿನ್ನವಾದದ್ದು ಗೆಂಡೆತಿಮ್ಮನದು. ಗೆಂಡೆತಿಮ್ಮ ಯಾವತ್ತೂ ಯಾರಿಗೂ ಅನ್ಯಾಯ, ಅನಾಚಾರ, ಕೇಡನ್ನು ಬಗೆದವನಲ್ಲ. ಆದರೂ ಅವನ ಈ ರೀತಿ ಅಸಹಾಯಕನನ್ನಾಗಿಯೇ ಮಾಡುತ್ತದೆ. ಆದರೇ ಬುಜಂಗಯ್ಯ ದೇಶ ಸುತ್ತಿದವನು. ಪ್ರತಿದಿನ ದಿನಪತ್ರಿಕೆ ಓದುತ್ತಿದ್ದವನು. ಹೊಸದರ ಕಡೆ ಯಾವಾಗಲೂ ಯೋಚಿಸುತ್ತಿದ್ದವನು. ತನ್ನ ರಕ್ಷಣೆಗಾಗಿ ಪೋಲೀಸಿನವರ ಮೊರೆ ಹೋಗುತ್ತಾನೆ. ಪೋಲೀಸ್ ಎಂದರೆ ಈ ಲಿಂಗಾಯಿತ ಉತ್ತಮ ಜನಗಳಿಗೆ ಎಲ್ಲಿಲ್ಲದ ಭಯದಂತೆ ಕಂಡುಬರುತ್ತಾರೆ. ಏಕೆಂದರೆ ತಮ್ಮ ಮಡಿವಂತಿಕೆ ಮತ್ತು ಗೌರವಕ್ಕೆ ಧಕ್ಕೆ ಬರುವುದು ಹಾಗು ಪೋಲೀಸಿನವರ ಒದೆಗಳು. ಆದ್ದರಿಂದಲೇ ಇವರು ರಾಜಿಗೆ ಮೊರೆ ಹೋಗುತ್ತಾರೆ. ಕಾಡುವಿನ ಚಂದ್ರೇಗೌಡ ಪೋಲೀಸಿನವರಿಗೆ ಹೆದರದೇ ಯಾವುದೇ ರಾಜಿಗೂ ಯೋಚಿಸದೆ ಅವರೊಂದಿಗೆ ನಡೆಯುತ್ತಾನೆ. ಇವನು ಶೂದ್ರನಾದ್ದರಿಂದಲೋ ಏನೋ ಯಾವುದಕ್ಕೂ ಹೆದರದೇ ಎಲ್ಲವನ್ನೂ ಧೈರ್ಯದಿಂದ ಎದುರಿಸುತ್ತಾನೆ. ಇವನಿಗೆ ಯಾವುದೇ ಮಡಿವಂತಿಕೆಯ ಪ್ರಶ್ನೆ ಅಡ್ಡಬರುವುದಿಲ್ಲ.

ಸಾಂಪ್ರದಾಯಿಕ ಮಡಿವಂತ ಸಂಸ್ಕೃತಿಯ ಒಂದು ಸಮಾಜ ಸ್ಥಿತ್ಯಂತರಗೊಳ್ಳುವಾಗ ಹಿಂಸೆ ತಡೆಯಲು ಸಾಧ್ಯವಿಲ್ಲ. ಭಾರತದಲ್ಲಿ ಬ್ರಿಟಿಷರ ಕಾಲದಿಂದಲೂ ಸ್ವತಂತ್ರ ಚಳವಳಿಗಳು ಕಂಡುಬಂದು ಹಲವು ಕ್ರಾಂತಿ, ಹಿಂಸೆ, ಹೋರಾಟ ಮುಂತಾದವು ನಡೆಯುತ್ತವೆ. ಸಮಾಜದಲ್ಲಿ ಹಿಂಸೆ ಸಂಭವಿಸಿದರೂ ಸ್ವತಂತ್ರ್ಯಾನಂತರ ಹಿಂಸೆ ಕಡಿಮೆಯಾಗಿ ಎಲ್ಲರಿಗೂ ಸಮಾನ ನ್ಯಾಯ, ಸಮಾನತೆಗಳು ಲಭಿಸಲು ಪ್ರಾರಂಭವಾಗುತ್ತವೆ. ಈ ಕಾದಂಬರಿಯಲ್ಲಿ ಕೊನೆಗೆ ಇದನ್ನು ನಿರೀಕ್ಷಿಸಬಹುದು.

ಬುಜಂಗಯ್ಯನನ್ನು ವಹಿಸಿಕೊಂಡು ಮಾತನಾಡುವ ಕರೀಗೌಡರು ನ್ಯಾಯಮಾಡುವಾಗ ರುದ್ರಪ್ಪ ಗೌಡರನ್ನು ವಾಚ್ಯವಾಗಿ ಬಯ್ಯುತ್ತಾನೆ. “ಹೋಗಯ್ಯಾ ನಾನು ಕಂಡೀವ್ನಿ, ಈ ಜಾತಿಗೆಟ್ಟ ಸೂಳೇಮಗ್ನಗೆ ನೀನು ಸಾಮೀಲಾಗಿ ನನ್ನತ್ರ ಕಿತ್ತುಕೊಳ್ಳೋದ್ನ ನೋಡ್ತೀನಿ”[೫] ಎನ್ನುತ್ತಾನೆ. ಮಡಿವಂತಿಕೆಯ ಬಗ್ಗೆ ಭಾಷಣ ಮಾಡುವ ಅವನು ಇಂತಹ ಹೊಲಸು ಮಾತನಾಡುವಾಗ ಮಡಿವಂತಿಕೆಯ ಪ್ರಜ್ಞೆಯನ್ನೂ ಕಳೆದುಕೊಂಡು ಬಿಡುತ್ತಾನೆ. ಇದು ಅವನ ಬೂಟಾಟಿಕೆಯ ಮಡಿವಂತಿಕೆಯನ್ನು ಎತ್ತಿ ತೋರಿಸುತ್ತದೆ. ಇದು ಬುಜಂಗಯ್ಯನಿಗೂ ಬೇಸರವಾಗಿ ಅವನು ಪ್ರತಿ ಮಾತನಾಡಿ ಜಗಳವಾಗುತ್ತದೆ. ಇದು ಕಾಡುವಿನಲ್ಲಿ ಬರುವ ಚಂದ್ರೇಗೌಡ ಮತ್ತು ಶಿವಗಂಗನ ಜಗಳದಂತೆ ಕಂಡುಬರುತ್ತದೆ. ಇದರಿಂದ ಚಂದ್ರೇಗೌಡನ ರಾಗಿ ಮೆದೆಗಳಿಗೆ ಬೆಂಕಿ ಬೀಳುವಂತೆ ಬುಜಂಗಯ್ಯನ ಹೋಟೆಲಿಗೂ ಬೆಂಕಿ ಬೀಳುತ್ತದೆ. ಇದು ಇಡೀ ಬುಜಂಗಯ್ಯನ ಮೇಲಿನ ದ್ವೇಷವನ್ನು ತೀರಿಸಿಕೊಳ್ಳುವಂತೆ ಚಿತ್ರಿತವಾಗುತ್ತದೆ.

ಇಷ್ಟೊಂದು ಕ್ರೂರವಾದ ಕೃತ್ಯಕ್ಕೆ ಕಾರಣವನ್ನು ನೋಡಿದಾಗ ಹೋಟೆಲಿನಿಂದ ಇವನಿಗಾದ ಆರ್ಥಿಕ ಪ್ರಗತಿ ಹೊಸದಾಗಿ ಜಮೀನನ್ನು ಕೊಂಡುಕೊಂಡದ್ದು, ಊರಿನಲ್ಲಿ ಮುಂದೆ ನಿಂತು 'ಪರ' ಮಾಡಿಸಿದ್ದು, ಊರಿನಲ್ಲಿ ನಾಟಕವಾಡಲು ಪ್ರೇರಣೆ ನೀಡಿದ್ದು ಯಶಸ್ವಿಯಾದದ್ದು ಮತ್ತು ಗ್ರಾಮದಲ್ಲಿ ನಡೆಯುವ ನ್ಯಾಯ ಪಂಚಾಯ್ತಿಯಲ್ಲಿ ಸಮಾನವಾದ ನ್ಯಾಯವನ್ನು ಹೇಳುವುದಾಗಿ, ಇದೆಲ್ಲಕ್ಕಿಂತ ಮುಖ್ಯವಾಗಿ ಶೆಟ್ಟರ ಜಾತಿಯ ಸುಶೀಲಳನ್ನು ಪ್ರೇಮವಿವಾಹವಾಗುವುದು, ಇದನ್ನು ಕಂಡು ಮೊದಲಿನಿಂದಲೂ ಇವನನ್ನು ನೋಡಿ ಸಹಿಸಲಾರದವರು ತಮ್ಮ ಆಕ್ರೋಶವನ್ನು ಈ ರೀತಿ ವ್ಯಕ್ತಪಡಿಸುತ್ತಾರೆ.

'ಪರಸಂಗದ ಗೆಂಡೆತಿಮ್ಮ'ನಲ್ಲಿ ಬರುವ ಜನರ ಆಕ್ರೋಶವು ಇದೇ ರೀತಿಯದಾದರೂ ಇಲ್ಲಿನ ದುರಂತವು ಬುಜಂಗಯ್ಯನ ದುರಂತಕ್ಕಿಂತ ಮಿಗಿಲಾದದ್ದಾಗಿದೆ. ಪರಿವಾರದವನಾದ ಗೆಂಡೆತಿಮ್ಮ ಮತ್ತು ಮರಂಕಿ ಗೌವಳ್ಳಿ ಮತ್ತು ಸಾಲುಂಡಿಯಲ್ಲಿನ ಜೀವನ ಪದ್ಧತಿಗಳನ್ನು ಬದಲಾವಣೆಗೆ ಕೊಂಡೊಯ್ಯುತ್ತಾರೆ. ಗೌವಳ್ಳಿಯಲ್ಲಿ ಆಧುನಿಕ ವಸ್ತುಗಳನ್ನು ಪರಿಚಯಿಸಿಕೊಟ್ಟಾಗ ಯಾವುದೇ ದ್ವೇಷವೂ ಉಂಟಾಗುವುದಿಲ್ಲ. ಇವರ ಗ್ರಾಮ್‌ಫೋನಿನಂತಹ ಆಧುನಿಕ ವಸ್ತುಗಳು ಬೇರೆ ಜಾತಿಯವರು ಬಳಸುತ್ತಿರಲಿಲ್ಲವಾದ್ದರಿಂದ ಪರಿವಾರದ ಕೇರಿಯ ಜನ ತಮ್ಮ ಕೇರಿಯು ಯಾವ ಕೇರಿಗೂ ಕಡಿಮೆಯಲ್ಲವೆಂದೂ ಬಾಯಿಬಿಟ್ಟು ಮಾತನಾಡುತ್ತಾರೆ. ಇದು ಮೊದಲಿನಿಂದಲೂ ಅವರು ಸಾಗಿಸಿಕೊಂಡು ಬಂದ ಜೀವನ ಕ್ರಮದಲ್ಲಿ ಬದಲಾವಣೆಯನ್ನು ಸೂಚಿಸುತ್ತದೆ. ಇಲ್ಲಿ ಯಾವುದೇ ಸಂಘರ್ಷಗಳೂ ಇರುವುದಿಲ್ಲ. ಆದರೆ ಸಾಲುಂಡಿಯಲ್ಲಿ ಈ ವಸ್ತುಗಳು ಇಡೀ ಊರಿನಲ್ಲಿ ಆಗುವ ಬದಲಾವಣೆಗೆ ಮತ್ತು ಸಂಘರ್ಷಕ್ಕೆ ಕಾರಣವಾಗುತ್ತದೆ.

'ಪರಸಂಗದ ಗೆಂಡೆತಿಮ್ಮ'ದಲ್ಲಿಯೂ ಕೃಷಿ ಬದುಕಿನ ಗ್ರಾಮೀಣ ಚಿತ್ರಣ ಕಾಣುತ್ತೇವೆ. ಸಾಲುಂಡಿ, ಗೌವಳ್ಳಿ, ಹುಳಿಮಾವು ಇವು ಕೃಷಿಯನ್ನೇ ನಂಬಿ ಬದುಕುತ್ತಿರುತ್ತವೆ. ಮೈಸೂರು ಪ್ರಾಂತ್ಯದ ಪರಿವಾರದವರು, ಒಕ್ಕಲಿಗರು, ಗೌಡರು, ಲಿಂಗಾಯತರು ಇಲ್ಲಿಯೂ ಕಂಡುಬರುತ್ತಾರೆ. ಇಲ್ಲಿ ಯಾವುದೇ ಆಧುನಿಕ ವ್ಯವಸ್ಥೆಯೂ ಕಂಡುಬರುವುದಿಲ್ಲ. ಇವರ ವ್ಯಾಪಾರ ಪದ್ಧತಿ ದವಸ ದಾನ್ಯಗಳನ್ನು ಕೊಡುವುದರ ಮೂಲಕವೇ ನಡೆಯುತ್ತದೆ. ಈ ಹಳ್ಳಿಯ ಜನರಿಗೆ ನಗರ ಬದುಕಿನ ಅರಿವು ತುಂಬಾ ಕಡಿಮೆ. ಇಡೀ ಕಾದಂಬರಿಯಲ್ಲಿ ಮೂರ್‍ನಾಲ್ಕು ಪಾತ್ರಗಳು ಮಾತ್ರ ಆಧುನಿಕ ಬದುಕನ್ನು ಕಂಡು ಅನುಭವಿಸುತ್ತಾರೆ. ಅವರಲ್ಲಿ ಕಥಾನಾಯಕ ಗೆಂಡೆತಿಮ್ಮನೂ ಒಬ್ಬ.

ಮರಂಕಿಯು ಸೌಂದರ್ಯ ಹೆಚ್ಚಿಸಿಕೊಳ್ಳುವುದಕ್ಕಾಗಿ ಮೊದಲು ಸ್ನೋ, ಪೌಡರ್, ಗಂಧದೆಣ್ಣೆ, ಒಳಗಡೆ ಹಾಕುವ ಬಾಡಿ, ಲಂಗ ಮುಂತಾದವುಗಳನ್ನು ಬಳಸಿಕೊಳ್ಳುತ್ತಾಳೆ. ಇವು ಗೆಂಡೆತಿಮ್ಮನ ಮುಖಾಂತರ ಮೊದಲು ದೇವೀರಮ್ಮನವರ ಕಿವಿಗೆ ಬೀಳುತ್ತದೆ. ನಂತರ ತನ್ನ ಮಗಳು ರತ್ನಿ ಮೈಸೂರಿಗೆ ಮದುವೆಯಾಗಬೇಕಾಗಿ ಬಂದಾಗ ಆಧುನಿಕ ವಸ್ತುಗಳಿಂದ ಸೌಂದರ್ಯ ಹೆಚ್ಚಿಸಿಕೊಳ್ಳಲು ಹಾಗು ಅವುಗಳ ಬಳಕೆಯ ಜ್ಞಾನ ತಿಳುವಳಿಕೆ ಬೇಕಾಗುವುದರಿಂದ ಗೆಂಡೆತಿಮ್ಮ ಸಾಲುಂಡಿಗೆ ಆ ವಸ್ತುಗಳನ್ನು ಕೊಂಡೊಯ್ಯಲು ಪ್ರಾರಂಭಿಸುತ್ತಾನೆ. ಇದು ದೇವೀರಮ್ಮನವರ ಒತ್ತಾಯದ ಮೇರೆಗೆ ಮಾತ್ರವಾಗಿರುತ್ತದೆ. ಇವುಗಳು ಊರಿನಲ್ಲಿ ಮೈನೆರೆದ ಹೆಣ್ಣುಮಕ್ಕಳ ಮತ್ತು ಹೊಸ ಸೊಸೆಯಂದಿರ ಮೇಲೂ ಪ್ರಭಾವ ಬೀರಿ ಒತ್ತಾಯಪೂರ್ವಕವಾಗಿ ತರಿಸಿಕೊಳ್ಳಲು ಪ್ರಾರಂಭಿಸುತ್ತಾರೆ. ಇಲ್ಲಿನ ಎಲ್ಲಾ ಸಂಘರ್ಷಕ್ಕೂ, ಗೆಂಡೆತಿಮ್ಮನ ಕುಟುಂಬದ ದುರಂತಕ್ಕೂ ಸ್ತ್ರೀಯೇ ಪ್ರಧಾನ ಕಾರಣಳಾಗಿರುತ್ತಾಳೆ. ಯೌವನದಲ್ಲಿ ಎಲ್ಲರಿಗೂ ತಮ್ಮ ಸೌಂದರ್ಯದ ಬಗ್ಗೆ ಕಾಳಜಿ ಇರುವಂತೆ ಸಾಲುಂಡಿಯ ಹೆಣ್ಣುಮಕ್ಕಳಿಗೂ ಉಂಟಾಗುತ್ತದೆ. ಇದು ಹಳ್ಳಿಯ ಹಿರಿಯ ತಲೆಮಾರಿನ ಜನರಿಗೆ ಇಷ್ಟವಾಗುವುದಿಲ್ಲ. ಆದರೂ ತಮ್ಮ ಗಂಡಂದಿರು ಕೊಡುವ ಪ್ರೋತ್ಸಾಹ ಸಾಕಾಗಿರುತ್ತದೆ. ಗೆಂಡೆತಿಮ್ಮ ಕೇವಲ ಆ ವಸ್ತುಗಳನ್ನು ತಂದು ಕೊಡುವ ಸೇವಕನಾಗಿರುತ್ತಾನೆ. ಈ ಊರಿನ ಹಿರಿಯರಿಗೆ ಈ ಪ್ರಕರಣದ ಬೇರು ಹಿಡಿಯದೆ ಕೇವಲ ಗೆಂಡೆತಿಮ್ಮನನ್ನು ಪಂಚಾಯ್ತಿಗೆ ಸೇರಿಸುತ್ತಾರೆ. ಆಲನಹಳ್ಳಿ ಅವರ ಕಾದಂಬರಿಗಳಲ್ಲಿ ಪಂಚಾಯ್ತಿ ನ್ಯಾಯವು ಸಹಜವಾಗಿ ಕಂಡುಬರುತ್ತದೆ. ಕಾಡು, ಬುಜಂಗಯ್ಯನ

ದಶಾವತಾರಗಳಲ್ಲಿ ಬರುವಂತೆಯೇ ಇಲ್ಲಿ ಕಂಡುಬಂದರೂ ಗೆಂಡೆತಿಮ್ಮನ ಅಸಹಾಯಕ ಸ್ಥಿತಿ ಮೇಲಿನ ಕಾದಂಬರಿಗಳ ಪಾತ್ರಗಳಿಗೆ ಇರುವುದಿಲ್ಲ. "ನಾಕು ಜನ ಮಾನಮರ್ವಾದಿಗೆ ಬದುಕವ್ರೆಲ್ಲ ವಸಿ ಕೇಳಿ... ಈ ದೇಶ ಕೆಡಿಸಿ ಬಂದಿರೋ ಸೂಳೆಮಗ ಕುಂತವ್ನೆ ನೋಡಿ... ಮಳ್ಳಿ ಕುಂತಂಗೆ... ಇವ್ನು ನಾವ್ಯಾರೂ ಇಲ್ದ ವೊತ್ನಲ್ಲಿ ಅರೀದ ಯೆಣ್ಣೈಕಳಿಗೆ ಪ್ಯಾಟೆಯವ್ರು ಆಕ್ತಾರೆ ನೋಡಿ ಅಂತ ಮನೆ ಆಳ್ಮಾಡೋ ಸಾಮಾನೆಲ್ಲಾ ತಂದುಕೊಟ್ಟವ್ನೆ. ಅದೆಷ್ಟು ದಿನಸಿ ಸುರಸ್ಕೊಂಡು ಹೋಗವ್ನೋ... ಇವ್ನು ತಂದು ಕೊಟ್ಟ ಅನಿಷ್ಟ ಸಾಮಾನಿಂದ ದಿನಾ ನಮ್ಮನೇಲಿ ಹತ್ತಿದ ಜಗಳ ಆರಿದಂಗಾಗದೆ... ಕಡೀಕೆ ನನ್ನ ಮಗ ಪಾಲು ಮಾಡಿಕೊಡಿ ಅನ್ನೋ ಮಟ್ಟಕ್ಕೆ ಬಂದು ಕುಂತವ್ನೆ... ಇಂಗೆ ಮುಪ್ಪೆಆಳ್ಮಾಡೋ ಕೆಲ್ಸ ಮಾಡವ್ನಲ್ಲ ಈ ಜಾತ್ಗೆಟ್ಟ ಬಡ್ಡಿಮಗ ಇವ್ನಿಂದ ನಾವು ಬದುಕಬೇಕೋ ಬ್ಯಾಡ್ವೋ... ನೀವೇ ಹೇಳಿ.?"[೬] ಎಂದು ದ್ಯಾವೇಗೌಡ ಹೇಳ್ತಾನೆ.

ಊರಿಗೆ ಅತ್ಯಂತ ಪ್ರಿಯವಾಗಿದ್ದ ಗೆಂಡೆತಿಮ್ಮ ಊರಿಗೆ ಬೇಕಾದ ಎಲ್ಲಾ ವಸ್ತುಗಳನ್ನು ತಂದುಕೊಡುತ್ತಿದ್ದರೂ ಇವನನ್ನು ಮನೆಹಾಳ ಎನ್ನುತ್ತಾರೆ. ಇವರ ಮನೆ ದೀಪಹಚ್ಚಲು ಇವನು ದಿನಾಲು ತಂದುಕೊಡುವ ಬೆಂಕಿಪೊಟ್ಟಣವನ್ನೇ ಬಳಸಬೇಕಿತ್ತಾದರೂ ಚುಚ್ಚು ಮಾತನಾಡುತ್ತಾರೆ. ಇವರಿಗೆ ಗೆಂಡೆತಿಮ್ಮನ ಬಗ್ಗೆ ವೈಯಕ್ತಿಕ ದ್ವೇಷವೇ ಹಾಗೂ ಅವನ ಪ್ರಗತಿಯನ್ನು ಸಹಿಸದವರಾಗಿರುತ್ತಾರೆ. ಪರಿವಾರದವನಾದ ಇವನು ಸುಂದರವಾದ ಮರಂಕಿಯನ್ನು ಮದುವೆಯಾದದ್ದು ಎಲ್ಲರಿಗೂ ಅಸೂಯೆ ಹುಟ್ಟಿಸುತ್ತದೆ. ಇತ್ತೀಚಿಗೆ ಗೆಂಡೆತಿಮ್ಮನ ವ್ಯಾಪಾರ ಕುದುರಿದ್ದು ದವಸಗಳನ್ನು ಗಾಡಿಯಲ್ಲಿ ಮೈಸೂರಿಗೆ ಸಾಗಿಸುತ್ತಿರುತ್ತಾನೆ. ಅಲ್ಲದೆ ತಾನು ಮೊದಲಿನಂತೆ ಅಸಹ್ಯವಾಗಿ ಕಾಣದೆ ಒಳ್ಳೆಯ ಬಟ್ಟೆ ಹಾಕುವುದು, ಶೇವಿಂಗ್‌ಮಾಡುವುದು ಇದಕ್ಕೊಪ್ಪುವ ಮೊದಲಿನಿಂದಲೂ ನಡೆನುಡಿ ಇವು ಈ ಜನಗಳಿಗೆ ಸಹಿಸದಾಗಿರುತ್ತವೆ. ಮೋಟಮ್ಮನ ಮನೆಯಲ್ಲಿನ ಸಂಘರ್ಷ, ಕೆಂಗಣ್ಣನ ಮಾತುಗಳು ಇವೆಲ್ಲವೂ ಇಡೀ ಊರಿನ ಮಾತುಗಳಾಗಿದ್ದರೂ ಯಾರೂ ಇವನ ಪರ ಮಾತನಾಡುವುದಿಲ್ಲ. ಗೌಡರು ತಮ್ಮ ಮಗಳ ಮದುವೆ ಹತ್ತಿರವಿದ್ದುದರಿಂದ ಹೆಚ್ಚು ಮಾತನಾಡದೆ ಇರುತ್ತಾರೆ. ಇದು ಗೆಂಡೆತಿಮ್ಮನಲ್ಲಿ ಜುಗುಪ್ಸೆ ಮತ್ತು ಮನಸ್ಸಿಗೆ ನೋವುಂಟುಮಾಡುತ್ತದೆ. ಸುಮಾರು ವರ್ಷಗಳಿಂದ ಈ ಊರಲ್ಲಿ ಮರ್ಯಾದೆಯಿಂದ ವ್ಯಾಪಾರ ಮಾಡಿಕೊಂಡಿದ್ದ, ಎಂದೂ ಯಾರಿಂದಲೂ ಕೆಟ್ಟವನು ಎನಿಸಿಕೊಂಡಿರದ ಗೆಂಡೆತಿಮ್ಮನಿಗೆ ಇದು ಅವಮಾನವಾಗುತ್ತದೆ. ಕೊನೆಗೆ ತನ್ನ ತಪ್ಪನ್ನು ಕ್ಷಮಿಸಿ ಎಂದು ಎಲ್ಲರಿಗೂ ಬೇಡಿಕೊಂಡರೂ ಐವತ್ತು ರೂಪಾಯಿ ದಂಡದೊಂದಿಗೆ ಪಂಚಾಯ್ತಿ ಮುಗಿದು ಗೆಂಡೆತಿಮ್ಮನ ದುರಂತವಾಗುತ್ತದೆ.

ಈ ಕಾದಂಬರಿ ಗ್ರಾಮೀಣ ಬದುಕನ್ನು ವಸ್ತುವನ್ನಾಗಿ ಒಳಗೊಂಡಿದ್ದು ಯಾವುದೇ ನಾಗರೀಕತೆಯ ಪರಿಚಯವಿಲ್ಲದೆ ಚಿಕ್ಕ ಚಿಕ್ಕ ಹಳ್ಳಿಗಳು, ಕುಗ್ರಾಮಗಳಿಗೆ ನಾಗರೀಕ ವಸ್ತುಗಳು ಪ್ರವೇಶಿಸಿ ಇಡೀ ಊರನ್ನೇ ತಲ್ಲಣಗೊಳಿಸುತ್ತವೆ. ಮತ್ತು ಇವರ ಬದುಕಲ್ಲಿ ಅಸ್ತವ್ಯಸ್ಥತೆ ಉಂಟಾಗುತ್ತದೆ. ಗ್ರಾಮೀಣ ಬದುಕಿನ ತಲ್ಲಣಗಳು ಇಲ್ಲಿ ಕಂಡುಬರುತ್ತವೆ. ಹಳ್ಳಿಯ ಯುವ ಪೀಳಿಗೆ ಆಧುನಿಕ ಬದುಕಿಗೆ ತುಡಿಯುವುದು ಇಲ್ಲಿದೆ. ಕುಟುಂಬದಲ್ಲಿನ ಸಂಘರ್ಷಗಳು, ಸಮಾಜದಲ್ಲಿ ನಡೆಯುವ ಅನೈತಿಕತೆ ಇವುಗಳಿಗೂ ಇಲ್ಲಿ ನೈಜವಾದ ಚಿತ್ರಣವಿದೆ. ನಾಗರೀಕತೆಯಿಂದ ಹಳ್ಳಿಗಳ ಬೆಳವಣಿಗೆ ಹೇಗೆ ಸಾಧ್ಯ ಎಂಬುದನ್ನು ಸಾಲುಂಡಿಯ ಜನಜೀವನದೊಂದಿಗೆ ತೋರಿಸುತ್ತಾರೆ. ಆಧುನಿಕ ಬದುಕಿನ ಶೈಲಿ ಸಾಂಪ್ರದಾಯಿಕವಾಗಿ ಬಂದ ಅವಿಭಕ್ತ ಕುಟುಂಬದ ಮೇಲೆ ಉಂಟುಮಾಡುವ ಪರಿಣಾಮ ತೀವ್ರವಾಗಿ ಕಾಣುತ್ತೇವೆ. ಇವೆಲ್ಲವೂ ಗ್ರಾಮೀಣ ಬದುಕಿಗೆ ಅಂಟಿಕೊಂಡು ಬೆಳೆದ ಲೇಖಕರ ಪ್ರಜ್ಞೆಯಲ್ಲಿ ಬದುಕಿನ ಅರ್ಥವನ್ನು ಕಾಣುವ ಪ್ರಯತ್ನವಾಗಿದೆ. ಇತ್ತೀಚಿನ ಗ್ರಾಮಗಳಲ್ಲಿ ಆಧುನಿಕ ವಸ್ತುಗಳನ್ನು ಬಳಸುವುದರಿಂದ ನಮ್ಮ ಬದುಕಿನಲ್ಲಿ ಹಲವು ರೀತಿಯ ಬದಲಾವಣೆಗಳು ಸಾಧ್ಯವಾಗಿದೆ.

## ಅಡಿ ಟಿಪ್ಪಣಿಗಳು

೧. ಜಿ. ಬಿ. ಜೋಷಿ, ಪುಟ ಬಂಗಾರ, (ಕಾಡು), ಪು. ೭೯೦

೨. ಶ್ರೀಕೃಷ್ಣ ಆಲನಹಳ್ಳಿ, ಗೋಡೆ, ಪು. ೨೮

೩. ಶ್ರೀಕೃಷ್ಣ ಆಲನಹಳ್ಳಿ, ಗೋಡೆ, ಪು. ೪೩

೪. ಶ್ರೀಕೃಷ್ಣ ಆಲನಹಳ್ಳಿ, ಭುಜಂಗಯ್ಯನ ದಶಾವತಾರಗಳು, ಪು. ೧೪

೫. ಶ್ರೀಕೃಷ್ಣ ಆಲನಹಳ್ಳಿ, ಭುಜಂಗಯ್ಯನ ದಶಾವತಾರಗಳು, ಪು. ೩೦೨

೬. ಶ್ರೀಕೃಷ್ಣ ಆಲನಹಳ್ಳಿ, ಭುಜಂಗಯ್ಯನ ದಶಾವತಾರಗಳು, ಪು. ೩೧೩

೭. ಶ್ರೀಕೃಷ್ಣ ಆಲನಹಳ್ಳಿ, ಭುಜಂಗಯ್ಯನ ದಶಾವತಾರಗಳು, ಪು. ೩೧೪

೮. ಶ್ರೀಕೃಷ್ಣ ಆಲನಹಳ್ಳಿ, ಪರಸಂಗದ ಗೆಂಡೆತಿಮ್ಮ, ಪು. ೧೫೪

ಅಧ್ಯಾಯ ಆರು

# ಮನುಷ್ಯ ಸಂಬಂಧಗಳ ನಡುವಿನ ಸಂಘರ್ಷಗಳು

ಮನುಷ್ಯ ಸಂಬಂಧಗಳ ನಡುವಿನ ಸಂಘರ್ಷ ಎಂದಾಗ ಅದು ಕೌಟುಂಬಿಕ ಸಂಘರ್ಷವೇ ಆಗಿರುತ್ತದೆ. ಮದುವೆಯಾಗಿ ತನ್ನ ತವರನ್ನು ಬಿಟ್ಟು ಗಂಡನ ಮನೆಗೆ ಬಂದ ಸೊಸೆಯು ಆ ಪರಿಸರಕ್ಕೆ ಹೊಂದಿಕೊಳ್ಳದೇ ಇರುವುದು, ಸೊಸೆಯ ಜೊತೆ ಅತ್ತೆ ಮಾವಂದಿರು ಹೊಂದಿಕೊಳ್ಳದೇ ಇರುವುದು, ಅಥವಾ ಮದುವೆಯಾದ ನಂತರ ಅತಿಯಾಗಿ ಪ್ರೀತಿಸುತ್ತಿದ್ದ ಮಗ ತಮ್ಮಿಂದ ದೂರವಾಗುತ್ತಿದ್ದಾನೆ ಎಂದು ತಿಳಿಯುವುದು ಮತ್ತು ಗಂಡನು ತನ್ನನ್ನು ಸರಿಯಾಗಿ ನೋಡಿಕೊಳ್ಳುತ್ತಿಲ್ಲ ಎಂದುಕೊಳ್ಳುವುದು ಇವೆಲ್ಲವೂ ಮನುಷ್ಯ ಸಂಬಂದಗಳ ನಡುವಿನ ಸಂಘರ್ಷಕ್ಕೆ ಕಾರಣಗಳಾಗಿವೆ. ಎಲ್ಲಾ ಕೌಟುಂಬಿಕ ಸಂಘರ್ಷಗಳು ಮನುಷ್ಯ ಸಂಬಂಧಗಳ ನಡುವಿನ ಸಂಘರ್ಷಗಳೇ ಆಗಿವೆ. ಆದರೆ ಎಲ್ಲಾ ಮನುಷ್ಯ ಸಂಬಂಧಗಳ ನಡುವಿನ ಸಂಘರ್ಷಗಳು ಕೌಟುಂಬಿಕ ಸಂಘರ್ಷಗಳಾಗಿರುವುದಿಲ್ಲ.

'ಪರಸಂಗದ ಗೆಂಡೆತಿಮ್ಮ' ಸ್ಥಿತ್ಯಂತರ ಸಮಾಜದ ಸಂವೇದನೆಗಳನ್ನೊಳಗೊಂಡ ಪ್ರಮುಖ ಕಾದಂಬರಿಯಾಗಿದೆ. ಇಡೀ ಕಾದಂಬರಿಯ ಉದ್ದಕ್ಕೂ ಹಲವು ಸಂಘರ್ಷಗಳು ಕಂಡುಬರುತ್ತವೆ. ಗೆಂಡೆತಿಮ್ಮನ ಕುಟುಂಬದಲ್ಲಿ ನಡೆಯುವ ಮನುಷ್ಯ ಸಂಬಂಧಗಳು ತೀರಾ ವಾಸ್ತವವಾಗಿ ಚಿತ್ರಣಗೊಂಡಿವೆ. ಮೊದಲನಿಂದಲೂ ಅನುಸರಿಸಿಕೊಂಡು ಬಂದಿರುವ ಕೆಲವು ಸಾಂಪ್ರದಾಯಿಕ ಆಚರಣೆಗಳು ಒಂದು ಸಂಕ್ರಮಣ ಕಾಲದಲ್ಲಿ ಬದಲಾವಣೆಗೆ ತುಡಿಯುತ್ತವೆ. ಅಂತಹ ಸಂದರ್ಭದಲ್ಲಿ ಇಡೀ ಕುಟುಂಬದ ಸದಸ್ಯರು ಅವರ ಅಭಿಪ್ರಾಯಗಳಿಗೆ ತಕ್ಕಂತೆ ಬೇರೆಯಾಗುತ್ತಾರೆ. ಬೇದಿಯಮ್ಮನ ಕುಟುಂಬವು ಒಂದು ಹಳೆಯ ಪರಿವಾರದ ಜಾತಿಯ ಕುಟುಂಬವಾಗಿದೆ. ಎಲ್ಲರೂ ಅನ್ಯೋನ್ಯವಾಗಿಯೇ ಇರುವುದು ಕಾದಂಬರಿಯಲ್ಲಿ ಕಂಡುಬರುತ್ತದೆ. ಗೆಂಡೆತಿಮ್ಮನಿಗೆ ಮದುವೆಯಾದ ನಂತರ ಸಂಘರ್ಷಗಳು ಪ್ರಾರಂಭವಾಗುತ್ತವೆ. ಮರಂಕಿಯ ಆಗಮನವೇ ಅವರ ನಡುವಿನ ಸಂಘರ್ಷಕ್ಕೆ ನಾಂದಿಯಾಗುತ್ತದೆ. ಮೊದಮೊದಲು ಬೇದಿಯಮ್ಮ ಮರಂಕಿಯನ್ನು ಚೆನ್ನಾಗಿಯೇ ನೋಡಿಕೊಂಡಳು. ತನ್ನ ಸೊಸೆಯಂತ ಸೊಸೆ ಬೇರೆಯಾರೂ ಇಲ್ಲವೆಂದು ಖುಷಿಪಟ್ಟಳು. ಆದರೆ ಮರಂಕಿಯ ಆಧುನಿಕ ವಸ್ತುಗಳ ಬಳಕೆ ಬೇದಿಯಮ್ಮಳಿಗೆ ಹಿಡಿಸುವುದಿಲ್ಲ. ಇದು ಗೆಂಡೆತಿಮ್ಮನಿಗೆ ಅತ್ತ ತನ್ನ ತಾಯಿಯನ್ನೂ ಬಿಡದ ಇತ್ತ ಹೆಂಡತಿಯನ್ನೂ ಬಿಡದ ವ್ಯಕ್ತಿಯಾಗುತ್ತಾನೆ. ಇವರಿಬ್ಬರ ಜಗಳದಿಂದ ಕುಟುಂಬದ ಬಗ್ಗೆ ನಿರಾಸಕ್ತಿಯನ್ನು ಹೊಂದುತ್ತಾನೆ. ಇವರಿಬ್ಬರ ಜಗಳದಿಂದ ಬೇಸರಗೊಳ್ಳುತ್ತಾನೆ. ತನ್ನ ತಾಯಿಯನ್ನು ಬಿಟ್ಟು ಹೆಂಡತಿಗೆ ಹೆಚ್ಚಿನ ಸಹಕಾರ ನೀಡುವುದನ್ನು ಕಂಡು "ಈ ಮಾಯಕಾತಿ ಬಂದು ಬಸವಣ್ಣನಂತ ನನ್ನ ಮಗನ್ನ ಕೋತಿ ಕುಣೆಸ್ದಂಗೆ ಕುಣೆಸ್ತಾಳೆ"[1] ಎಂದು ದಿನವೂ ಜಗಳ ಪ್ರಾರಂಭಿಸುತ್ತಾಳೆ. ಗೆಂಡೆತಿಮ್ಮನ ಅಣ್ಣ ಗೂಳಾನಾಯ್ಕ ತನ್ನ ತಮ್ಮನಿಗೆ ಎಂದೂ

ಎದಿರಾಡುವುದಿಲ್ಲ. ಗೆಂಡೆತಿಮ್ಮನೂ ಅಷ್ಟೇ ನಯವಿನಯದಿಂದ ಇರುತ್ತಾನೆ. 'ನಮ್ಮ ಅಣ್ಣ ಅತ್ಗೆ ಅಂದ್ರೆ ದರುಮರಾಯ್ರು ಇದ್ದಂಗೆ' ಎಂದು ತಿಳಿದಿರುತ್ತಾನೆ.

ಹೆಂಡತಿಯ ಮಾತಿಗೆ ತಲೆದೂಗುವ ಗೆಂಡೆತಿಮ್ಮನನ್ನು ತಾಯಿ ವಿರೋಧಿಸುತ್ತಾಳೆ. ಇದಕ್ಕೆ ಕಾರಣ ಚಿಕ್ಕಂದಿನಿಂದ ಸಾಕಿ ಸಲಹಿದ ಮಗ ಇತ್ತೀಚಿಗೆ ಬಂದ ಹೆಂಡತಿಯನ್ನು ಆಶ್ರಯಿಸುವುದು. ಇವಳಿಗೆ ತನ್ನ ಮಗ ಎಲ್ಲಿ ತನ್ನಿಂದ ದೂರವಾಗುತ್ತಾನೋ ಎನ್ನುವ ಭಯ ಕಾಡುತ್ತದೆ. ಗೆಂಡೆತಿಮ್ಮ ತನ್ನನ್ನೇ ನಂಬಿಬಂದ ಹೆಂಡತಿಯನ್ನು ಅಷ್ಟೇ ಪ್ರೀತಿಸುತ್ತಿರುತ್ತಾನೆ. ಇದು ಅತ್ತೆ ಮತ್ತು ಸೊಸೆಯ ನಡುವೆ ಸಂಘರ್ಷಕ್ಕೆ ಕಾರಣವಾಗಿದೆ. ಬೇದಿಯಮ್ಮ ತನ್ನ ಅತ್ತೆತನವನ್ನು ಶಾಶ್ವತವಾಗಿ ಈ ಮನೆಯಲ್ಲಿ ಉಳಿಸಿಕೊಳ್ಳಬೇಕು, ಮನೆಯ ಎಲ್ಲಾ ಸದಸ್ಯರೂ ತನ್ನ ಮಾತಿನಂತೆ ನಡೆಯಬೇಕು ಎಂದು ಬಯಸುತ್ತಾಳೆ. ಹೊಸ ತಲೆಮಾರಿನ ಮರಂಕಿ ಇದಾವುದನ್ನೂ ಲೆಕ್ಕಿಸುವುದಿಲ್ಲ. ಮರಂಕಿಯನ್ನು ತಮ್ಮ ದಾರಿಗೆ ತಂದುಕೊಳ್ಳಬೇಕೆಂದು ಬೇದಿಯಮ್ಮ ಮತ್ತು ಗೂಳಾನಾಯ್ಕ ಕೂಡಿ ಬಡಿಯುತ್ತಾರೆ. ಆಗ ಗೆಂಡೆತಿಮ್ಮ ತಾಳ್ಮೆ ಕಳೆದುಕೊಂಡು ಏಕವಚನದಲ್ಲಿಯೇ 'ಲೇ ಮುದ್ಕಿ ಸಾಕು ನಿಲ್ಸು ನಿನ್ನ ಕಿರಚಾಟ' ಎನ್ನುತ್ತಾನೆ. ಇದು ಈ ಕುಟುಂಬದಲ್ಲಿನ ವಿಘಟನೆಗೆ ಕಾರಣವಾಗುತ್ತದೆ. ಮನೆ ಪಾಲಾಗುತ್ತದೆ. ಭಿನ್ನವಾದ ಜೀವನಶೈಲಿ ಹೊಂದಿದ್ದ ಇವರಲ್ಲಿ ಒಂದಾಗಿ ಬಾಳುವ ಅವಕಾಶಗಳೂ ಇದ್ದವು. ಆದರೆ ಇವರೆಲ್ಲಾ ತಮ್ಮತಮ್ಮ ಬದುಕಿಗೆ ಮಾತ್ರ ಸೀಮಿತವಾದಾಗ ಈ ಕುಟಂಬದ ಸದಸ್ಯರು ಬೇರೆ ಬೇರೆಯಾಗುತ್ತಾರೆ.

ತಾನೇ ಮೆಚ್ಚಿ ಮದುವೆ ಮಾಡಿಕೊಂಡು ಬಂದ ಚಿಕ್ಕಸೊಸೆ ಮರಂಕಿಯನ್ನು ಬಂಗಾರದಂತ ಸೊಸೆ ಸಿಕ್ಕಳೆಂದು ಬೀಗುತ್ತಿದ್ದವಳು ಅವಳಿಂದ ಉಂಟಾದ ಬೇಸರವನ್ನು ಸಹಿಸದೆ 'ಆ ಚಿನಾಲಿ ಇವನ ತಲೆ ಕೆಡಿಸಿ ವೋಗದೆ ಇದ್ರೆ ಇವನು ಇಂಗಾಗ್ತ ಇದ್ದನ? ಎಲ್ಲಾ ನನ್ನ ಗ್ರಹಚಾರ' ಎಂದುಕೊಳ್ಳುತ್ತಾಳೆ. ಗೆಂಡೆತಿಮ್ಮನ ಬದಲಾವಣೆಗಳೆಂದರೇ ಮದುವೆಗೆ ಮೊದಲು ತಾನು ದುಡಿದು ತಂದದ್ದನ್ನು ತಂದು ತಾಯಿಗೆ ಕೊಡುತ್ತಿದ್ದನು. ಮದುವೆಯಾದ ನಂತರ ಮನೆಯ ವಾತಾವರಣ ಬಿಗಡಾಯಿಸಿದಾಗ ಅವನಲ್ಲಿಯೂ ಅವುಗಳು ಬದಲಾಗಲಾರಂಭಿಸಿದವು. ತಾಯಿ ಮತ್ತು ಹೆಂಡತಿಯ ನಡುವಿನ ಜಗಳ ಹೆಚ್ಚಾಗಲು ಈ ರೀತಿಯಲ್ಲಿ ಗೆಂಡೆತಿಮ್ಮನೂ ಕಾರಣನಾಗುತ್ತಾನೆ. ತನ್ನ ತಾಯಿಯ ಮನಸ್ಥಿತಿಯನ್ನು ಕಂಡಿದ್ದವನು ಮರಂಕಿಗೆ ಹೊಂದಿಕೊಳ್ಳುವಂತೆ ಒತ್ತಾಯಿಸಬಹುದಾಗಿತ್ತು. ಆದರೇ ತಾನು ದುಡಿದು ತಂದದ್ದನ್ನು ತನ್ನ ಹೆಂಡತಿಗೇ ಕೊಟ್ಟಾಗ ಬೇದಿಯಮ್ಮನಲ್ಲಿ ಸಿಟ್ಟು ಮತ್ತಷ್ಟು ಹೆಚ್ಚಾಗುತ್ತದೆ. ಮರಂಕಿಯೂ ತನ್ನ ಜೀವನ ಶೈಲಿಯನ್ನು ಬದಲಾಯಿಸಿಕೊಳ್ಳುವುದಿಲ್ಲ. ತನ್ನ ಮನೆತನದ ಸ್ಥಿತಿಗತಿಯನ್ನು ಅರಿತಿದ್ದ ಗೆಂಡೆತಿಮ್ಮ ದೇವೀರಮ್ಮನವರ ಮಾತುಕೇಳಿ ಮನೆ ಪಾಲುಮಾಡಿಸುತ್ತಾನೆ. ಇದು ಇಡೀ ಸಾಲುಂಡಿಯ ಜನ ನಂಬಿದ ರಾಮ-ಲಕ್ಷ್ಮಣರಂತ ಅಣ್ಣತಮ್ಮಂದಿರ ಸಂಬಂಧ ಮುರಿದು ಬಿದ್ದು ತಮ್ಮ ಆದರ್ಶವೂ ಕೊನೆಗೊಳ್ಳುತ್ತದೆ. ಮರಂಕಿಯು ಬಯಸುವ ಜೀವಶೈಲಿ ಅವನಿಗೆ ಯಾಕೋ ಅತಿಯಾದವು ಎನ್ನಿಸತೊಡಗುತ್ತದೆ. ಆದ್ದರಿಂದಲೇ ದಿನಕಳೆದಂತೆ ಪ್ರತಿದಿನ ಬರುತ್ತಿದ್ದವನು ಎರಡು ಮೂರು ದಿನಗಳಿಗೊಮ್ಮೆ ಬರಲು ಪ್ರಾರಂಭಿಸುತ್ತಾನೆ. ಇಲ್ಲಿ ಗಂಡ-ಹೆಂಡತಿಯರ ನಡುವಿನ ವಿರಸವು ಕಂಡುಬರುತ್ತದೆ.

ಗೆಂಡೆತಿಮ್ಮನ ಮನಸ್ಸು ಮರಂಕಿಯನ್ನು ಕಂಡು ನಿರಾಸಕ್ತಿಯನ್ನು ತೋರುತ್ತದೆ. ಇವಳ ಪಕ್ಕದಲ್ಲಿ ಮಲಗಿದ್ದರೂ ಅವಳ ಕಡೆ ತಿರುಗಿನೋಡದಷ್ಟು ಮನಸ್ಸು ಕಲ್ಲಾಗುತ್ತದೆ. ಈ ಸಮಯಕ್ಕೆ ಗೌವಳ್ಳಿಯ ಹಿರಿಯ ತಲೆಮಾರಿನ ಜನಗಳೊಂದಿಗೆ ಹೊಂದಿದ್ದ ಸಂಬಂಧದಲ್ಲಿ ಬಿರುಕು ಕಾಣಿಸಿಕೊಳ್ಳುತ್ತದೆ. ಊರಿನ ಎಲ್ಲರಿಗೂ ಮೆಚ್ಚುಗೆಯಾಗಿದ್ದ ವ್ಯಕ್ತಿ ಆಧುನಿಕ ವಸ್ತುಗಳು ತಂದುಕೊಟ್ಟಿದ್ದಕ್ಕಾಗಿ ಹಳ್ಳಿಯ ಜನರ ದೃಷ್ಟಿಯಲ್ಲಿ ದುಷ್ಟನಾಗಿ ಕಂಡುಬರುತ್ತಾನೆ. "ನಾಕು ಜನ ಮಾನಮರ್ಯಾದಿಗೆ ಬದುಕವ್ರೆಲ್ಲ ವಸಿ ಕೇಳಿ... ಈ ದೇಸ ಕೆಡ್ಸಿ ಬಂದ ಸೂಳೆಮಗ ಕುಂತವ್ನೆ ನೋಡಿ... ಮಳ್ಳಿಕುಂತಂಗೆ"[3] ಅವರ ದೃಷ್ಟಿಯಲ್ಲಿ ಇವನು ದೇಶವನ್ನೆ ಕೆಡಿಸಿದವನಾಗುತ್ತಾನೆ. ಆಗ ಸಮಾಜದಲ್ಲಿ ಅಭದ್ರತೆ, ಭಯ, ಅವಮಾನ, ಕ್ರೌರ್ಯಗಳು ಸಂಭವಿಸುತ್ತವೆ. ತನ್ನ ಹೆಂಡತಿಯ ಮೇಲಿನ ಅತಿಯಾದ ಪ್ರೀತಿ

ಅವನ ಈ ಸ್ಥಿತಿಗೆ ಕಾರಣವಾಗುತ್ತದೆ. ಮರಂಕಿ ಮನೆ ಪಾಲಾದ ಮೇಲೆ ಒಂದು ದಿನವೂ ಅತ್ತೆಯನ್ನು ಮಾತನಾಡಿಸುವುದೇ ಇಲ್ಲ. ಬೇದಿಯಮ್ಮ ಮನೆ ಪಾಲಾದದ್ದರಿಂದ ಕೊರಗಿ ಕೊರಗಿ ಸಾವನ್ನಪ್ಪುತ್ತಾಳೆ. ಮರಂಕಿ ತನ್ನ ಗಂಡನ ನಿರಾಸಕ್ತಿ, ದೌರ್ಬಲ್ಯಗಳನ್ನು ಕಂಡು ತನ್ನ ಹಳೆಯ ಚಾಳಿ ಅನೈತಿಕ ಸಂಬಂಧವನ್ನು ಮುಂದುವರೆಸತ್ತಾಳೆ. ಮತ್ತು ದುರಂತ ಸಾವಿಗೆ ಬಲಿಯಾಗುತ್ತಾಳೆ.

ಮನುಷ್ಯನ ಸಂಬಂಧಗಳ ನಡುವೆ ಉಂಟಾಗುವ ಬಿರುಕು ಸಂಘರ್ಷಗಳು ಗೆಂಡೆತಿಮ್ಮನ ಜೀವನದಲ್ಲಿ ಕೌಟುಂಬಿಕ ವಿಘಟನೆ, ನಂಬಿದ್ದ ಮೌಲ್ಯಗಳಿಗೆ ಧಕ್ಕೆ, ಲೈಂಗಿಕ ನಿರಾಸಕ್ತಿ, ಅಸ್ಥಿರತೆಯ ಭಯ, ಅವಮಾನ, ಕ್ರೌರ್ಯ ಇವು ಇವನನ್ನು ಹೆಚ್ಚಾಗಿ ಕಾಡುತ್ತವೆ. ಜೊತೆಗೆ ತನ್ನ ಹೆಂಡತಿ ಹೊಂದಿದ್ದ ಅನೈತಿಕ ಸಂಬಂಧ ಇನ್ನಷ್ಟು ಪಾತಾಳಕ್ಕಿಳಿಯುವಂತೆ ಮಾಡಿ, ದುರ್ಬಲ ಮನಸ್ಸಿನ ಗೆಂಡೆತಿಮ್ಮ ದುರಂತ ಸಾವನ್ನಪ್ಪುತ್ತಾನೆ. ಹಳೆಯ ಜೀವನ ಪದ್ಧತಿಗೆ ಬದಲಾಗಿ ಹೊಸ ಬದುಕಿನ ಇನ್ನೊಂದು ಮುಖವನ್ನು ಪರಿಚಯಿಸುವುದರ ಮೂಲಕ ತಾವು ಹೊಂದಿದ್ದ ಮೌಲ್ಯಗಳು ಹೇಗೆ ಅಧಃಪತನವನ್ನು ಕಾಣುತ್ತದೆ ಎಂಬುದನ್ನು ಈ ಕಾದಂಬರಿ ಸೂಚಿಸುತ್ತದೆ.

'ಬುಜಂಗಯ್ಯನ ದಶಾವತಾರಗಳು' ಕಾದಂಬರಿಯಲ್ಲಿ ಪರಸಂಗದ ಗೆಂಡೆತಿಮ್ಮ ಕಾದಂಬರಿಯಲ್ಲಿ ಬರುವಂತೆ ಆಧುನಿಕ ವಸ್ತುಗಳು ಕಂಡುಬರುವುದರ ಜೊತೆಗೆ ಆಧುನಿಕ ಜೀವನ ಪದ್ಧತಿ, ಬದುಕಿನ ಭಿನ್ನ ಅವಕಾಶಗಳನ್ನು ಒಳಗೊಂಡಿದೆ. ಬುಜಂಗಯ್ಯನ ಕುಟುಂಬ ಒಂದು ಸಾಂಪ್ರದಾಯಿಕ ಬದುಕಿಗೆ ಕಟ್ಟುಬಿದ್ದು ಅದನ್ನು ಕಳಚಿಕೊಂಡು ಹೊರಬರುವಂತೆ ಕಂಡುಬಂದರೂ ಬುಜಂಗಯ್ಯ ಇದನ್ನು ಮೀರುತ್ತಾನೆ. ಇದು ಅವನ ಕುಟುಂಬದ ಸದಸ್ಯರಿಗೆ ಬೇಸರವನ್ನುಂಟುಮಾಡುತ್ತಿದೆ. ಮೊದಲಿನಿಂದಲೂ ಕೃಷಿ ಮಾಡಿಕೊಂಡು ಬಂದಿದ್ದ ಅವನು ಇದ್ದಕ್ಕಿದ್ದಂತೆ ಹೋಟೆಲ್ ಇಡುವ ಪ್ರಸ್ತಾಪ ಬಂದಾಗ ತನ್ನ ತಾಯಿ, ಹೆಂಡತಿ, ಮಾವ, ಊರಿನ ಲಿಂಗಾಯತ ಸಮುದಾಯದ ಸ್ನೇಹಿತರು ಮುಂತಾದವರೊಂದಿಗೆ ಸಂಘರ್ಷ ಪ್ರಾರಂಭವಾಗುತ್ತದೆ. ಇವುಗಳ ನಡುವಿನ ಸಂಘರ್ಷದಿಂದ ಸಂಭವಿಸುವ ದುರಂತ ಛಾಯೆ ಕಾದಂಬರಿಯುದ್ದಕ್ಕೂ ಕಂಡುಬರುತ್ತದೆ.

ಬುಜಂಗಯ್ಯ ಕೃಷಿಯನ್ನು ಬಿಟ್ಟಿದ್ದು ತನ್ನ ಆರ್ಥಿಕ ಸ್ಥಿತಿಗತಿಯನ್ನು ಸುಧಾರಿಸುವುದಕ್ಕಾಗಿ. ಆದರೆ ಇದು ತನ್ನ ಮನೆಯ ಸಂಬಂಧಗಳ ಸ್ಥಿತಿಗತಿಯನ್ನೆ ಬದಲಿಸುತ್ತದೆ. ತನ್ನ ಹೆಂಡತಿ ಹೋಟೆಲ್ ಇಡುವುದಕ್ಕೆ ಪ್ರಥಮವಾಗಿ ವಿರೋಧ ವ್ಯಕ್ತಪಡಿಸುತ್ತಾಳೆ. ಇದಕ್ಕೆ ಕಾರಣ ಶಿವಾಚಾರದವರಾದ ನಾವು ಹೋಟೆಲ್ ಇಡಬಾರದು ಎಂದು ತಿಳಿದಿದ್ದ ಕೆಟ್ಟ ಮೌಲ್ಯಕ್ಕೆ ಕಟ್ಟುಬಿದ್ದದ್ದು. ಇದರಿಂದ ಮನೆಯಲ್ಲಿ ಪರಸ್ಪರ ಬೇಸರದ ವಾತಾವರಣ ನಿರ್ಮಾಣವಾಗುತ್ತದೆ. ಅವಳು ಮೊದಲಿನಿಂದಲೂ ಸಿಡುಕಿನ ಸ್ವಭಾವದವಳಾಗಿದ್ದರಿಂದ ಇದಕ್ಕೆ ಕಿಂಚಿತ್ತೂ ಬೆಲೆಕೊಡುವುದಿಲ್ಲ. ಹಾಗು ಹೋಟೆಲ್ ಇಟ್ಟಮೇಲೆ ಸುಶೀಲಳೊಂದಿಗೆ ಸಂಬಂಧ ಹೊಂದುವುದರಿಂದ ಇನ್ನಷ್ಟು ಹೆಚ್ಚಾಗಿ ಪಂಚಾಯ್ತಿಯವೆರಗೂ ನಡೆಯುತ್ತದೆ. ತೌರಿನಿಂದ ಇವಳನ್ನು ಕರೆದುಕೊಂಡು ಬರಲು ಹೋದಾಗ ಅವಳ ಮನೆಯವರು ಅವನ ಮೇಲೆ ಹಲ್ಲೆ ನಡೆಸುತ್ತಾರೆ. ಮನೆಯನ್ನು ಪಾಲುಮಾಡಿಸುತ್ತಾರೆ. ಪಾರ್ವತಿ ಬೇರೆ ಸಂಸಾರ ಸಾಗಿಸುತ್ತಾಳೆ. ಬುಜಂಗಯ್ಯನ ತಾಯಿ ತನ್ನ ಮಗನ ಪರಿಸ್ಥಿತಿಯನ್ನು ನೋಡಿ ಎದೆ ಬಡಿದುಕೊಂಡು ಅಳುತ್ತಾಳೆ. ಇವಳಿಗೂ ಹೋಟೆಲ್ ವಿಷಯದಲ್ಲಿ ಮಗನ ಬಗ್ಗೆ ಬೇಸರ ಉಂಟಾಗುತ್ತದೆ. ತನ್ನ ಮಗ ಸಮಾಜದಲ್ಲಿ ಎಲ್ಲರಿಂದ ಅವಮಾನವನ್ನು ಅನುಭವಿಸುತ್ತಾನೆ. ತನ್ನ ಎದುರೇ ಇವನು ಕಷ್ಟಪಡುವುದನ್ನು ನೆನೆದು ತನ್ನ ದುಃಖವನ್ನು ತೋಡಿಕೊಳ್ಳುತ್ತಾಳೆ. ಆದರೂ ಇವಳು ತನ್ನ ಮಗನೊಂದಿಗೇ ಜೀವಿಸುತ್ತಾಳೆ. ನವ್ಯದ ಧೋರಣೆಗಳಂತೆ ಸಾಂಪ್ರದಾಯಿಕವಾಗಿ ಸ್ಥಾಪಿಸಿಕೊಂಡು ಬಂದ ಅವಿಭಕ್ತಕುಟುಂಬ, ಗಂಡಹೆಂಡತಿಯರ ನಡುವಿನ ಸಂಬಂಧ, ಸಾಮರಸ್ಯ ಜೀವನ ಇವುಗಳಿಗೆ ಭಂಗತರುವಂತೆ ಇಲ್ಲಿನ ಪಾರ್ವತಿಯ ಪಾತ್ರ ಚಿತ್ರಣಗೊಂಡಿದೆ.

ಮನುಷ್ಯ ಸಂಘಜೀವಿಯಾದ್ದರಿಂದ ಅವನಿಗೆ ಗೆಳೆಯರು ಹೆಚ್ಚಾಗಿದ್ದು ಬುಜಂಗಯ್ಯ ತನ್ನ ಸ್ನೇಹಿತರನ್ನೂ ಹೋಟೆಲ್ ಇಡುವ ವಿಚಾರದಲ್ಲಿ ಅಭಿಪ್ರಾಯವನ್ನು ಪಡೆಯುತ್ತಾನೆ. ಇವರಿಗೆ ಬುಜಂಗಯ್ಯನ ಈ ಕೆಲಸ

ಸರಿಕಾಣುವುದಿಲ್ಲ. ತಮ್ಮ ಲಿಂಗಾಯತ ಸಂಪ್ರದಾಯಕ್ಕೆ ಧಕ್ಕೆ ಬರುತ್ತದೆ ಎಂದು ಯೋಚಿಸುವುದರ ಜೊತೆಗೆ ಹೋಟೆಲ್‌ನಿಂದ ಬುಜಂಗಯ್ಯನ ಸ್ಥಾನಮಾನ, ಆರ್ಥಿಕ ಸ್ಥಿತಿ ಮುಂತಾದವು ಹೆಚ್ಚಾದರೆ! ಎಂದು ಯೋಚಿಸಿ "ಅದ್ಯಾಕಣ್ಣ ಈ ದುರ್ಬುದ್ಧಿ ಬಂತು ನಿಂಗೆ? ನಾವು ಶಿವಾಚಾರದವ್ರಾಗಿ ಯಾವ್ಯಾವ ಜಾತಿಯವ್ರೂ ಬಂದು ಕುಡಿಯೋ ಎಂಜಲು ಲೋಟ ತೊಳಿಬ್ಯಾಕ? ಇರೋನೊಬ್ಬ ನೀನು ನಿಂಗೆ ನಿಮ್ಮಪ್ಪ ಮಡಗಿರೊ ಆಸ್ತೀನೆ ಸಾಕಪ್ಪ"[9] ಎನ್ನುವುದರಿಂದ ತಿಳಿಯುತ್ತದೆ. ಇದು ಕೇವಲ ಸ್ನೇಹಿತರ ಮಾತಾಗಿರದೆ ಇಡೀ ಊರಿನ ಶಿವಾಚಾರದವರ ಅಭಿಪ್ರಾಯವಾಗಿದೆ. ಇಲ್ಲಿಂದಲೇ ತನ್ನ ಜಾತಿಯ ಜನಗಳ ಮನಸ್ಸಿನಲ್ಲಿ ದುಷ್ಟನಾಗುತ್ತಾನೆ. ಇದು ಇಡೀ ಕಾದಂಬರಿಯ ಉದ್ದಕ್ಕೂ ಕಂಡುಬಂದು ದುರಂತ ಸಾವನ್ನು ಕಾಣುತ್ತಾನೆ.

ಬುಜಂಗಯ್ಯ ಹಳಸಲಾಗಿ ಸಂಪ್ರದಾಯಕ್ಕೆ ಹೊಂದಿಕೊಳ್ಳುವವನಲ್ಲ, ಬದಲಾಗಿ ಬದುಕು ಬಂದಂತೆ ಸ್ವೀಕರಿಸುವವನು ಮತ್ತು ವಾಸ್ತವದಲ್ಲಿ ನಿಂತು ಯೋಚಿಸುವ ವ್ಯಕ್ತಿ. ಇವನು ಹಲವು ಸಂಬಂಧಗಳೊಂದಿಗೆ ಪ್ರೀತಿ, ವಿಶ್ವಾಸವನ್ನು ಹೊಂದಿರುತ್ತಾನೆ. ಬೇರೆ ಜಾತಿಯವರಾದರೂ ಕರೀಗೌಡ ಹಾಗು ಮುದ್ದೇಗೌಡರಂತಹ ಹಿರಿಯರ ಮಾರ್ಗದರ್ಶನವನ್ನು ಪಡೆಯುತ್ತಿರುತ್ತಾನೆ. ತನ್ನ ವ್ಯಾಪಾರಕ್ಕೆ ಸಹಾಯಕವಾಗುವಂತೆ ತನ್ನ ವಯಸ್ಸಿನವರಾದ ಚನ್ನಮಲ್ಲ, ಪುಂಡ್ರಿ ಮುಂತಾದವರೊಂದಿಗೆ ಜಾತಿ ಬೇಧವನ್ನೂ ಮರೆತು ಹೊಂದಿಕೊಳ್ಳುತ್ತಾನೆ. ಇವನು ಊರಿನ ಮಕ್ಕಳೊಂದಿಗೆ ಗೋಲಿ ಆಡುವುದರೊಂದಿಗೂ ಕಂಡುಬರುತ್ತಾನೆ. ಇಷ್ಟೆಲ್ಲಾ ಒಳ್ಳೆಯ ಗುಣಗಳನ್ನು ಹೊಂದಿದ್ದಾಗ್ಯೂ ಕೊನೆಗೆ ಆಧ್ಯಾತ್ಮದ ಬದುಕನ್ನು ಬಯಸುತ್ತಾನೆ. ಹಾಗು ತನ್ನ ಹೆಂಡತಿ ಸುಶೀಲಳನ್ನು ಅತ್ಯಾಚಾರ ಮಾಡಿದ ನಾರಾಯಣನನ್ನು ಸಾವಿನ ದವಡೆಯಿಂದ ಪಾರುಮಾಡಿ ದುರಂತ ಸಾವನ್ನು ಅನುಭವಿಸುತ್ತಾನೆ.

'ಗೋಡೆ' ಕಾದಂಬರಿಯಲ್ಲಿ ಒಬ್ಬ ಬಾಲಕನು ಹಲವು ಸಂಬಂಧಗಳನ್ನು ಹೊಂದಿದ್ದು ಅವುಗಳು ಒಂದು ಕುಟುಂಬದ ರಕ್ತಸಂಬಂಧಗಳಾಗಿದ್ದಾಗಲೂ ಹೇಗೆ ಸಂಘರ್ಷಗಳು ಘಟಿಸುತ್ತವೆ ಎಂಬುದನ್ನು ಹೇಳುತ್ತದೆ. ಅವನು ಊರಿನ ಒಂಗು ಪ್ರತಿಷ್ಠಿತ ಕುಟಂಬದ ವ್ಯಕ್ತಿ ತನ್ನ ಹಿಂದಿನವರು ಸಂಪಾದಿಸಿದ ಗೌರವವನ್ನು ಕೊಂಡೊಯ್ಯುವ ವಾಹಕದಂತಿದ್ದಾನೆ. ಆದರೆ ಇದನ್ನು ಇಷ್ಟಪಡದ ತನ್ನ ಚಿಕ್ಕಮ್ಮ ಚಿನ್ನವ್ವ ಮನೆ ಪಾಲಾಗುವವರೆಗೂ ತಾನು ದೊಡ್ಡಮನೆಗೆ ಕಾಲಿಡುವುದಿಲ್ಲ ಎಂದು ತವರುಮನೆಯಲ್ಲೇ ಉಳಿಯುತ್ತಾಳೆ. ಅವಳು ತನ್ನ ಅತ್ತೆ, ಗಂಡ, ವಿಧವೆಯಾದ ತಾಯವ್ವ ಮತ್ತು ಕಿಟ್ಟಿ ಇವರೆಲ್ಲರ ಮೇಲೂ ದ್ವೇಷವನ್ನು ಕಾರುತ್ತಾಳೆ. ಅವಳು ಅವಿಭಕ್ತ ಕುಟಂಬಕ್ಕೆ ಹೊಂದಿಕೊಳ್ಳದ ಸಿಡುಕು ಸ್ವಭಾವದ ಹೆಣ್ಣು. ಹೆಚ್ಚು ಜನರ ಸಂಪರ್ಕವನ್ನು ಬಯಸುವುದಿಲ್ಲ. ಆದರೇ ಕಿಟ್ಟಿ ತಮ್ಮ ದೊಡ್ಡ ಕುಟುಂಬದಲ್ಲೆ ಬದುಕು ಕಳೆಯುವ ಆಸೆ. ಚಿನ್ನವ್ವ ತಾಯವ್ವಳ ಚಾರಿತ್ರ್ಯವನ್ನು ಅಲ್ಲಗೆಳೆಯುತ್ತಾಳೆ. 'ನಂಗೆಲ್ಲ ಗೊತ್ತು ವೋಗೆ ನನ್ನ ಸವತಿ' ಎನ್ನುತ್ತಾಳೆ. ತನ್ನ ಚಾರಿತ್ರ್ಯದ ಬಗ್ಗೆ ಮಾತನಾಡುವ ಇವಳಿಂದ ಬೇರೆಯಾಗಬೇಕೆಂದು ತಾಯವ್ವ ಮನೆಯನ್ನು ಪಾಲುಮಾಡಲು ಒಪ್ಪಿಕೊಳ್ಳುತ್ತಾಳೆ.

ಮಾಸ್ತಿಗೌಡ ಪರಿಸ್ಥಿತಿಯ ಒತ್ತಡಕ್ಕೆ ಮಣಿದು ಅಸಹಾಯಕನಂತೆ ಕಂಡುಬರುತ್ತಾನೆ. ಏನೆಲ್ಲಾ ಪ್ರಯತ್ನಪಟ್ಟರೂ ಅವನು ತನ್ನ ಕುಟುಂಬದ ಜನರೊಂದಿಗೆ ಬಾಂಧವ್ಯ ಬೆಸೆಯಲು ಸಾಧ್ಯವಾಗುವುದಿಲ್ಲ. ಬದಲಿಗೆ ತನ್ನ ಹೆಂಡತಿಯೊಂದಿಗೆ ಜಗಳಕ್ಕಿಳಿಯುತ್ತಾನೆ. ಇವನ ಮನೆಯ ಈ ಸ್ಥಿತಿ ದುಃಖವನ್ನುಂಟುಮಾಡುತ್ತದೆ. ಕಿಟ್ಟಿ ಕೇವಲ ಇವನ ಅಣ್ಣನ ಮಗನಾಗಿರದೆ "ಅಣ್ಣನ ಮಗ ಆದ್ರೇನು? ನನ್ನ ಮಗ ಆದ್ರೇನು? ಬೆಳಗೋದು ಈ ಮನೆ ದೀಪ ತಾನೇ?"[10] ಎಂದುಕೊಳ್ಳುತ್ತಾನೆ. ಆದರೇ ಚಿನ್ನವ್ವ ಮಾತ್ರ ಪಾಲಾದರೂ ಇವನ ಬಗ್ಗೆ ದ್ವೇಷವನ್ನು ಸಾಧಿಸುತ್ತಾಳೆ. ಅಸೂಯೆ ಪಡುವ ಹೆಣ್ಣಾದ ಇವಳು ಕಿಟ್ಟಿಗೆ ಹೆಚ್ಚು ಜಮೀನು ಉಳಿಯುತ್ತದೆ ಎಂದು ಮನಸ್ಸಿನಲ್ಲೇ ಕುದಿಯುತ್ತಾಳೆ. ಈ ಮನೆಯ ಮರ್ಯಾದೆ ಕಳೆಯುವಂತೆ ಈ ಮನೆಯ ಮಧ್ಯದಲ್ಲಿ ಒಂದು ಗೋಡೆ ನಿರ್ಮಾಣವಾಗಿ ಸಂಬಂಧಗಳು ಛಿದ್ರಗೊಳ್ಳುತ್ತವೆ.

ಕಿಟ್ಟಿಯ ತಾಯಿ ಗಂಡನನ್ನು ಕಳೆದುಕೊಂಡ ವಿಧವೆಯಾಗಿದ್ದು ಅವಳೊಂದಿಗೆ ಚಿನ್ನವ್ವ ಯಾವುದೇ ಮಾತನಾಡುವುದಿಲ್ಲ. ಸದಾ ಅವಳೊಂದಿಗೆ ದ್ವೇಷವನ್ನು ಕಾರುತ್ತಾಳೆ. ಆದರೇ ತಾಯವ್ವ ಎಂಥಾ ಸಮಯದಲ್ಲೂ ಅವಳೊಂದಿಗೆ ಎಂದೂ ಜಗಳವಾಡುವುದಿಲ್ಲ. ಇವಳಿಂದ ಸಾಕಷ್ಟು ಮಾನಸಿಕವಾಗಿ ನೊಂದಿರುತ್ತಾಳೆ. 'ನಂಗೆಲ್ಲಾ ಗೊತ್ತು ವೋಗೆ ನನ್ನ ಸವತಿ' ಎಂದು ಹೇಳಿದಾಗಲೂ ತನ್ನ ಚಾರಿತ್ರ್ಯಕ್ಕೆ ತನ್ನ ಪಾವಿತ್ರ್ಯದ ಬಗ್ಗೆ ಸಂಶಯದ ಮಾತನಾಡಿದಾಗಲೂ ಅವಳೊಂದಿಗೆ ಜಗಳಮಾಡುವುದಿಲ್ಲ. ಕಿಟ್ಟಿಗೆ ತನ್ನ ಹಳೆಯ ತಲೆಮಾರಿನವರ ಬಗ್ಗೆ ಸಿಟ್ಟನ್ನು ಹೊಂದಿರುತ್ತಾನೆ. ಇವರಿಗೆ ಯಾವಾಗಲೂ ನಂಬಿದ್ದ ಸಂಪ್ರದಾಯ ಪಾವಿತ್ರ್ಯತೆ ಉಳಿಸುವುದೇ ಆಗಿದೆ. ಇವರ ಯಾವ ಆಚರಣೆಗಳೂ ಇವನಿಗೆ ಹಿಡಿಸುವುದಿಲ್ಲ. ತನ್ನ ಅಜ್ಜಿಯನ್ನು ಕಂಡಾಗ "ಹುಟ್ಟಿದ ಮಗನ ಮುಖ ನೋಡದೆ ಅವರು ಸತ್ತರು. ಯಾವ ವಿಷಗಳಿಗೆಯಲ್ಲಿ ಹುಟ್ಟುತ್ತಿದನೋ ಹಾಗೆಯೇ ಅಪ್ಪನನ್ನು ತಿಂದುಹಾಕಿದ"[3] ಎಂದು ಹೇಳುವುದು ಅತೃಪ್ತಿಯನ್ನು, ಬೇಸರವನ್ನು ಉಂಟುಮಾಡುತ್ತದೆ. ಕಾದಂಬರಿಯಲ್ಲಿ ಕಿಟ್ಟಿ ಬೌದ್ಧಿಕವಾಗಿ ಬೆಳವಣಿಗೆ ಹೊಂದುತ್ತಿರುವಾಗ ಸಮಾಜದ, ಮನೆಯ ಆಗುಹೋಗುಗಳ ಬಗ್ಗೆ ತಿಳಿಯುತ್ತಾನೆ. ತನ್ನ ಅಪ್ಪನಂತೆಯೇ ತಾನೂ ಸಮಾಜದಲ್ಲಿ ಗೌರವವನ್ನು ಸಂಪಾದಿಸಬೇಕೆಂದುಕೊಳ್ಳುತ್ತಾನೆ. ಇವನು ನಿಧಾನವಾಗಿ ತನ್ನ ತಾಯಿಯೊಂದಿಗೆ ಸಂಘರ್ಷವನ್ನು ಪ್ರಾರಂಭಿಸುತ್ತಾನೆ. ಏಕೆಂದರೆ ಮನೆ ಪಾಲಾದನಂತರ ತಾಯವ್ವ ಬೇಸಾಯದ ಸಹಾಯಕ್ಕಾಗಿ ಕೆಂಪೇಗೌಡನ ಸಹಾಯವನ್ನು ಪಡೆಯುತ್ತಾಳೆ. ಆದರೆ ಕಿಟ್ಟಿ ಮತ್ತು ಚಿಕ್ಕಪ್ಪನಿಗೆ ಇದು ಬೇಸರವನ್ನು ಉಂಟುಮಾಡತ್ತದೆ. ಕೆಂಪೇಗೌಡ ಈ ದೊಡ್ಡ ಮನೆಯ ಹೆಸರು ಕೆಡಿಸುವುದಕ್ಕಾಗಿ ಪ್ರಯತ್ನ ಮಾಡುತ್ತಿರುತ್ತಾನೆ. ಅವನು ತಾಯವ್ವಳೊಂದಿಗೆ ಹೊಂದಿದ ಸಂಬಂಧ ನಿಧಾನವಾಗಿ ಮನೆಯ ಒಳಗೆ ಬಂದು ನಗುತ್ತಾ ಜೋರಾಗಿ ಮಾತನಾಡುವವರೆಗೂ ಬಂದಾಗ ಕಿಟ್ಟಿ ತನ್ನ ತಾಯಿಯ ಜೊತೆ ಮೌನವಾಗಿಯೇ ಸಂಘರ್ಷವನ್ನು ನಡೆಸುತ್ತಾನೆ. ಕಾದಂಬರಿಯ ಕೊನೆಯಲ್ಲಿ ತಾನು ಕುಂತಿದ್ದ ಗಾಡಿ ಕೆಂಪೇಗೌಡನದು ಎಂದು ತಿಳಿದಾಗ ತನ್ನ ತಾಯಿಯ ಬಗ್ಗೆ ಮನಸ್ಸಿನಲ್ಲೇ ಕುದಿಯುತ್ತಾನೆ. ಆಗ ಅವನೊಬ್ಬ ಅಸಹಾಯಕನಂತೆ ಕಂಡುಬರುತ್ತಾನೆ. ಅವನು ಬೌದ್ಧಿಕವಾಗಿ ಸಾಕಷ್ಟು ತಿಳಿದುಕೊಳ್ಳುತ್ತಿದ್ದರಿಂದ ಅದನ್ನು ತನಗಾದ ಅವಮಾನ ಎಂದೇ ಭಾವಿಸುತ್ತಾನೆ.

ಸ್ಥಾಪಿತ ಅವಿಭಕ್ತ ಕುಟುಂಬದಲ್ಲಿ ಹಲವು ಸಂಬಂಧಗಳು ಕುಟುಂಬದ ವಿಘಟನೆಗಾಗಿ ಹೇಗೆ ತುಡಿಯುತ್ತವೆ ಎನ್ನುವುದನ್ನು ಕಂಡರೂ ಕೆಲವೊಮ್ಮೆ ಇವೆಲ್ಲವೂ ಶಾಂತ ಸ್ವಭಾವದವುಗಳಾಗಿ ಕಂಡುಬರುತ್ತವೆ. ಆದರೆ ಚಿನ್ನವ್ವನ ಸಿಟ್ಟು, ದ್ವೇಷ ಈ ಮನೆಯನ್ನು ಇಬ್ಭಾಗ ಮಾಡಿಸುತ್ತದೆ. ಇಲ್ಲಿನ ಸಂಘರ್ಷಗಳು ಒಬ್ಬ ಬಾಲಕನನ್ನು ಕೇಂದ್ರಬಿಂದುವಾಗಿ ಇಟ್ಟುಕೊಂಡು ಉಳಿದವುಗಳು ಇದರ ಸುತ್ತಲೂ ನಡೆಯುವಂತೆ ಕಾದಂಬರಿಯಲ್ಲಿ ಕಂಡುಬರುತ್ತದೆ. ಇದು ಊಳಿಗಮಾನ್ಯ ವ್ಯವಸ್ಥೆಯ ಒಂದು ಸಮಾಜವಾಗಿ ಕಂಡುಬರುತ್ತದೆ. ಮತ್ತು ಈ ವ್ಯವಸ್ಥೆಯ ಘೋರ ರೂಪವನ್ನು ಕಾಣದೇ ಕ್ರೌರ್ಯವಿರದೇ ಶಾಂತವಾಗಿಯೇ ಮೌನದಲ್ಲಿ ಸಂಘರ್ಷ ಕೊನೆಗೊಳ್ಳುತ್ತದೆ.

'ಗೋಡೆ' ಕಾದಂಬರಿಯಲ್ಲಿ ಕಂಡುಬರುವಂತೆ 'ಕಾಡು'ನಲ್ಲಿಯೂ ಒಂದು ಹಳ್ಳಿಯ ಚಿತ್ರಣವಿದೆ. ಬಾಲಕ ಕಿಟ್ಟಿಯು ಕಾದಂಬರಿಯಲ್ಲಿ ಮೌನವಾಗಿಯೇ ಸಂಘರ್ಷವನ್ನು ಸಾಧಿಸುತ್ತಾನೆ. ಊಳಿಗಮಾನ್ಯ ಪದ್ಧತಿಯಲ್ಲಿ ಸ್ತ್ರೀಸ್ಥಾನಮಾನಗಳನ್ನು ಎರಡೂ ಕಾದಂಬರಿಗಳು ಚಿತ್ರಿಸುತ್ತವೆ. ಇಲ್ಲಿದ್ವೇಷ, ಕೌರ್ಯ, ಕಾಮಗಳು ಹೆಚ್ಚಾಗಿ ಕಂಡುಬರುತ್ತವೆ. ಚಂದ್ರೇಗೌಡ ಮತ್ತು ಕಮಲಮ್ಮ ಇವರ ನಡುವೆ ದಾಂಪತ್ಯದಲ್ಲಿ ಬೇಸರ, ದುಃಖ, ಯಾತನೆಗಳು ಕಂಡುಬರುತ್ತವೆ. ಹೆಂಡತಿ ಇದ್ದಾಗ್ಯೂ ಅವನು ಹೊಸೂರಿನ ಬಸಕ್ಕಳ ಸಂಬಂಧ ಇಟ್ಟುಕೊಂಡಿರುತ್ತಾನೆ. ಕಮಲಮ್ಮ ತನ್ನ ಗಂಡನ ಬಗ್ಗೆ ಅಗಾಧವಾದ ಪ್ರೀತಿ ಇಟ್ಟುಕೊಂಡಿರುತ್ತಾಳೆ. ಆದರೆ ಇವನು ಮಾತ್ರ ಪ್ರತಿದಿನ ರಾತ್ರಿ ಬಸಕ್ಕನ ಮನೆಗೆ ಹೋಗುತ್ತಿರುತ್ತಾನೆ. ಕಮಲಮ್ಮಳ ಅಣ್ಣನ ಮಗ ಕಿಟ್ಟಿ ಕಮಲಮ್ಮಳ ದುಃಖವನ್ನು ಕಂಡು ತನ್ನ ಮಾವನ ಬಗ್ಗೆ ಸಿಟ್ಟನ್ನು ವ್ಯಕ್ತಪಡಿಸುತ್ತಾನೆ. ಈ ಎರಡೂ ಪಾತ್ರಗಳು ಕಾದಂಬರಿಯಲ್ಲಿ ಮೌನವಾಗಿಯೇ ತಮ್ಮ ದುಃಖವನ್ನು ಕಳೆಯುತ್ತವೆ. ಹೊಸೂರಿನ ತನ್ನ ಹಳೆಯ ಸ್ನೇಹಿತನಾದ ಶಿವಗಂಗನಿಗೆ ಮತ್ತು ಚಂದ್ರೇಗೌಡನಿಗೆ

ತೀವ್ರವಾದ ಸಂಘರ್ಷ ಇರುತ್ತದೆ. ಇದಕ್ಕೆ ಕಾರಣ, ಹೊಸೂರಿಗೆ ಸಂಬಂಧಿಸಿದ ಹೆಣ್ಣು ಮತ್ತು ಭೂಮಿ ಚಂದ್ರೇಗೌಡನಿಗೆ ಸೇರಿದ್ದಾಗಿರುತ್ತದೆ. ಇವರ ವೈಯಕ್ತಿಕ ಸಂಬಂಧಗಳು ಕುಟುಂಬದ ಇತರ ಸದಸ್ಯರನ್ನು ದುರಂತಕ್ಕೆ ಕೊಂಡೊಯ್ಯುವಂತೆ ಹೊಸೂರಿನ ಜನ ಕಮಲಮ್ಮಳನ್ನು ಅತ್ಯಾಚಾರ ಮಾಡುತ್ತಾರೆ. ಇದು ಚಂದ್ರೇಗೌಡನ ಪ್ರತಿಷ್ಠೆ, ಗೌರವ, ಮರ್ಯಾದೆಯ ಪ್ರಶ್ನೆಯಾದ್ದರಿಂದ ಅವರನ್ನು ಬಲಿತೆಗೆದುಕೊಳ್ಳುತ್ತಾನೆ. ಕಾದಂಬರಿಯಲ್ಲಿ ಕೆಂಚ-ದೇವಿ, ಬಸಕ್ಕ-ಚಂದ್ರೇಗೌಡ, ಗುಡಿ ಅಯ್ನೋರು-ಹೊಲೇರ ಕಾಳಿ ಇವೆಲ್ಲವೂ ಲೈಂಗಿಕ ಸಂಘರ್ಷದಂತೆ ಕಂಡುಬಂದರೂ ಇವು ಮನುಷ್ಯ ಸಂಬಂಧಗಳ ನಡುವೆ ನಡೆಯುವ ಸಂಘರ್ಷಗಳಾಗಿವೆ.

ನವ್ಯಲೇಖಕರು ಯಾವುದೇ ಪಾತ್ರವನ್ನು ಅತಿಯಾದ ಪ್ರೀತಿ, ಅಭಿಮಾನ, ಆತ್ಮೀಯತೆ ಮುಂತಾದವುಗಳಿಂದ ಚಿತ್ರಿಸುವುದಿಲ್ಲ. ಇವರಲ್ಲಿ ಮನುಷ್ಯ ಸಂಬಂಧ ಎನ್ನುವುದಕ್ಕೆ ಉನ್ನತವಾದ ಸ್ಥಾನವೇನೂ ಕಂಡುಬರುವುದಿಲ್ಲ. ಇದನ್ನು ಹಿಂದಿನ ಕಾದಂಬರಿಗಳಾದ ಪರಸಂಗದ ಗೆಂಡೆತಿಮ್ಮ, ಗೋಡೆ, ಬುಜಂಗಯ್ಯನ ದಶಾವತಾರಗಳಲ್ಲಿ ನೋಡಬಹುದು. ಇವರಿಗೆ ಆದರ್ಶ ಸಂಬಂಧಗಳನ್ನು ಚಿತ್ರಿಸುವುದು ಅಷ್ಟು ಹಿತವೆನಿಸುವುದಿಲ್ಲ. ಇವರ ಕಾದಂಬರಿಗಳು ಮನುಷ್ಯ ಸಂಬಂಧಗಳು ದ್ವೇಷ, ಕೌರ್ಯ, ರಕ್ತಪಾತ, ಹಿಂಸೆ, ಬಲಿ ಮುಂತಾದವುಗಳಿಂದಲೇ ಎದ್ದು ಕಾಣುತ್ತದೆ. ನವೋದಯದಲ್ಲಿ ಕಂಡುಬರುವ ಮನುಷ್ಯ ಸಂಬಂಧಗಳನ್ನು ಹೊಡೆದು ಹಾಕಿ ವಾಸ್ತವವಾಗಿ ಇರುವ ಹಲವು ವಿಭಿನ್ನ ಸಂಬಂಧಗಳ ನಡುವಿನ ಸಂಘರ್ಷವನ್ನೆ ನವ್ಯ ಕಾದಂಬರಿಕಾರರು ಚಿತ್ರಿಸುತ್ತಾರೆ.

'ತಪ್ತ' ಕತೆಯ ನಿರೂಪಕ ತನ್ನ ತಾಯಿಯನ್ನು ತನ್ನ ಅಕ್ಕನ ಮಗಳು ಗೌರಿಯನ್ನು ಬಿಟ್ಟು ನಾಗರಿಕ ಜೀವನಕ್ಕೆ ಒಗ್ಗಿಕೊಂಡು ಪ್ರಭಾಳನ್ನು ಪ್ರೀತಿಸಿ ಮದುವೆಯಾಗಬೇಕೆಂದು ನಿರ್ಧರಿಸುತ್ತಾನೆ. ಇದಕ್ಕೆ ಇವನ ತಾಯಿ ವಿರೋಧ ವ್ಯಕ್ತಪಡಿಸುತ್ತಾಳೆ. ನಿನ್ನ ಅಕ್ಕನಿಗೆ ಮಾತುಕೊಟ್ಟಿದ್ದೇನೆ.... ಅವಳನ್ನೇ ನೀನು ಮದುವೆಯಾಗಬೇಕು' ಎಂದು ಒತ್ತಾಯಿಸುತ್ತಾಳೆ. ಆದರೆ ಇವನು ರಕ್ತಸಂಬಂಧದ ಮದುವೆಯನ್ನು ಇಷ್ಟಪಡುವುದಿಲ್ಲ. ತನ್ನ ಮಗನನ್ನು ತನ್ನ ಬಳಿಯೇ ಉಳಿಸಿಕೊಳ್ಳಲು ತನ್ನ ಹಿಂದಿನ ಕಷ್ಟಗಳನ್ನು ಹೇಳಿಕೊಳ್ಳುತ್ತಾಳೆ. ಅವರಿವರ ಕಾಲುಕಟ್ಟಿ ನಿನ್ನ ಬೆಳೆಸಿ ದೊಡ್ಡವನಾಗಿ ಮಾಡಿದ್ದು... ಈಗ ಇದಿರಾಡುವುದಕ್ಕಲ್ವ? ಎಂದು ದುಃಖಿಸುತ್ತಾಳೆ. ಕತೆಯಲ್ಲಿ ನಿರೂಪಕ ಚಂಚಲ ಸ್ವಭಾವದವನಾಗಿದ್ದಾನೆ. ಇವನಿಗೆ ತಾನು ಪ್ರೀತಿಸಿದ ಪ್ರಭಾಳನ್ನು ಮದುವೆಯಾಗುವುದು ಇಷ್ಟ ಆದರೆ ತನ್ನ ತಾಯಿ ಮತ್ತು ಗೌರಿಯ ಬಗ್ಗೆಯೂ ಯೋಚಿಸುತ್ತಾನೆ. ಮನೆಯ ಗಂಡುಮಗನಾಗಿ ಅವರಿಂದ ತಾನು ಬೇರೆಯಾದರೆ ಅವರ ಪರಿಸ್ಥಿತಿ ಏನಾಗುತ್ತದೆ ಎಂದು ಯೋಚಿಸುತ್ತಾನೆ. ಇದಕ್ಕೂ ಮೊದಲು ತನ್ನ ಅಕ್ಕ ನೇಣುಹಾಕಿಕೊಂಡು ಸಾವನ್ನಪ್ಪಿರುತ್ತಾಳೆ. ಏಕೆಂದರೆ ನಿರೂಪಕನು ಗೌರಿಯನ್ನು ಮದುವೆ ಆಗುವುದಿಲ್ಲ ಎಂದು ಹೇಳಿದ್ದಕ್ಕೆ ಇದೆಲ್ಲವನ್ನೂ ಗಮನಿಸಿದ ನಿರೂಪಕ ತನ್ನ ರಕ್ತಸಂಬಂಧಗಳ ಮಧ್ಯದಲ್ಲಿಯೇ ಹಳ್ಳಿಯಲ್ಲಿ ಉಳಿಯುತ್ತಾನೆ. ಕತೆ ಇನ್ನೂ ಮುಂದುವರೆಯುತ್ತದೆ ಎಂದು ತಿಳಿದಿದ್ದಾಗಲೇ ಕತೆ ಮುಕ್ತಾಯವಾಗಿರುತ್ತದೆ.

ಸಾಂಪ್ರದಾಯಿಕವಾಗಿ ನಡೆದುಬಂದ ಮದುವೆಗಾಗಿ ಕುಟುಂಬದ ಒಳಸಂಬಂಧ ಅಥವಾ ರಕ್ತಸಂಬಂಧದಲ್ಲಿ ಇರುವ ನಿಷೇಧಿತವಲ್ಲದ ವ್ಯಕ್ತಿಗಳನ್ನು ಬಯಸುವುದು 'ತೊರೆ' ಕತೆಯಲ್ಲಿ ಚಿತ್ರಿತವಾಗಿದೆ. ಶಂಕರಪ್ಪ ಒಳಸಂಬಂಧದಲ್ಲಿ ಹೆಣ್ಣನ್ನು ಹುಡುಕಿ ತನ್ನ ತಮ್ಮನಿಗೆ ಮದುವೆ ಮಾಡದೆ ಹೊಸ ಸಂಬಂಧವನ್ನು ತಂದು ಮದುವೆ ಮಾಡಿದಾಗ ತಮ್ಮ ಪ್ರಭುವಿನ ಹೆಂಡತಿ ತಾರಾ ಮದುವೆಯಾದ ಮೂರೆ ತಿಂಗಳಿಗೆ ಬೇರೆ ಸಂಸಾರ ಹೂಡಿರುತ್ತಾಳೆ. ತನ್ನ ಹೆಂಡತಿಯ ತಂಗಿ ಲಕ್ಷ್ಮಿಯನ್ನು ಮದುವೆ ಮಾಡಿಕೊಂಡಿದ್ದರೆ ತನ್ನ ಮನೆಯಲ್ಲಿ ಈ ದುರಂತ ಸಂಭವಿಸುತ್ತಿರಲಿಲ್ಲ ಎಂದುಕೊಳ್ಳುತ್ತಾನೆ. ಲಕ್ಷ್ಮಿ ಮತ್ತು ಪ್ರಭು ಪ್ರೀತಿಸುತ್ತಿರುವ ವಿಷಯ ತಿಳಿದಿದ್ದಾಗ್ಯೂ ಪ್ರಭುವಿಗೆ ಬೇರೆ ಮದುವೆ ಮಾಡಿದ್ದಕ್ಕಾಗಿ ಪಶ್ಚಾತ್ತಾಪ ಪಡುತ್ತಾರೆ. 'ತಪ್ತ' ಮತ್ತು 'ತೊರೆ' ಎರಡೂ ಕತೆಗಳಲ್ಲಿ ಮದುವೆಯ ವಿಷಯವೇ ಪ್ರಧಾನವಾಗಿ ಕಂಡುಬರುತ್ತದೆ. ಮದುವೆ ಎಂಬುದು ಗಂಡು-ಹೆಣ್ಣುಗಳ ಸಂಬಂಧವಲ್ಲ ಬದಲಾಗಿ ಹಲವು ಸಂಬಂಧಗಳ ಗೋಳೂ ಇದೆ ಎಂಬುದು ಎದ್ದು ಕಾಣುತ್ತದೆ. ಈ ಕತೆಗಳಲ್ಲಿ ಪ್ರೀತಿ, ಪ್ರೇಮ

ಇವೆಲ್ಲಾ ಶಾಶ್ವತವಾದದ್ದಲ್ಲ. ಜೀವನವನ್ನು ಬಂದಂತೆ ಅನುಭವಿಸಬೇಕು ಎಂಬ ಧೋರಣೆಯೂ ಕತೆಯ ಒಳಗೆ ಅಡಗಿದೆ. ಆದ್ದರಿಂದ ಸ್ತ್ರೀ ಪಾತ್ರಗಳಲ್ಲಿ ಈ ಚಿತ್ರಣ ಎದ್ದುಕಾಣುತ್ತದೆ. 'ತಪ್ತ' ಕತೆಯ ಗೌರಿಗೆ ನಿರೂಪಕನೇ ಬೇಕು ಎಂದೇನೂ ಹಟ ಹಿಡಿಯುವುದಿಲ್ಲ. ಮೌನವಾಗಿರುತ್ತಾಳೆ. ಮತ್ತು 'ತೊರೆ' ಕತೆಯ ಲಕ್ಷ್ಮಿ ತಾನು ಪ್ರಭುವನ್ನು ಮದುವೆಯಾಗಲಿಲ್ಲವಲ್ಲ ಎಂದು ಯಾವ ಹಿಂಸೆಯೂ ನಡೆಯುವುದಿಲ್ಲ. ಈ ಇಬ್ಬರೂ ವಾಸ್ತವದಲ್ಲಿ ಬಂದದ್ದನ್ನು ಹಾಗೆಯೇ ಅನುಭವಿಸುತ್ತಾರೆ.

'ಸೀಮಂತ' ಕತೆಯಲ್ಲಿ ಮದುವೆಯ ನಂತರ ಪ್ರಾರಂಭವಾಗುವ ಸಂಘರ್ಷಗಳು ಕಂಡುಬರುತ್ತವೆ. ಇಲ್ಲಿ ಸ್ತ್ರೀ ನಿಜವಾಗಿಯೂ ಮನುಷ್ಯರೊಂದಿಗೆ ಸಂಘರ್ಷಕ್ಕೆ ಇಳಿಯುತ್ತಾಳೆಯಾದರೂ ಇವಳದು ಕೇವಲ ಮೌನವೇ. ಆಲನಹಳ್ಳಿಯವರು ಸ್ತ್ರೀಯನ್ನು ಹೆಚ್ಚು ಮೌನ ಸಂಘರ್ಷದಿಂದಲೇ ಚಿತ್ರಿಸಿದ್ದಾರೆ. ಇವಳಿಗೆ ಸಮಾಜದ ಬಗ್ಗೆ ಯೋಚನೆಯಿಲ್ಲ. ತನ್ನ ಕುಟುಂಬದ ಗಂಡ ಮತ್ತು ಅತ್ತೆಯ ಬಗ್ಗೆ ಯೋಚಿಸುತ್ತಾಳೆ. ಒಂದು ಕಡೆ ದೈಹಿಕವಾಗಿ ದುರ್ಬಲವಾದ ಗಂಡ ಇನ್ನೊಂದೆಡೆ ತನ್ನನ್ನು ಹುಟ್ಟು ಬಂಜೆ ಎಂದು ಹೇಳುವ ಅತ್ತೆ ಇವರೆಡೂ ಸಂಬಂಧಗಳು ಕಾಡುತ್ತಿರುತ್ತವೆ. ತನ್ನ ಬಸಿರಿಗೆ ಕಾರಣನಾಗುವ ಶ್ರೀಧರನೂ ಇವರೊಂದಿಗೆ ಸೇರಿಕೊಳ್ಳುತ್ತಾನೆ. ಈ ಮೂರು ಪಾತ್ರಗಳು ಪದ್ಮಳ ಅಂತರಂಗವನ್ನು ಕಲಕುತ್ತವೆ. ತಳಮಳಗೊಳ್ಳುತ್ತಾಳೆ. ತನ್ನ ನೋವನ್ನು ಯಾರಿಗೂ ಹೇಳಿಕೊಳ್ಳಲಾಗದ ಅಸಹಾಯಕ ಸ್ತ್ರೀಯಾಗಿ ಕಂಡುಬರುತ್ತಾಳೆ. ತನ್ನನ್ನು ಪ್ರೀತಿಸುವ ಗಂಡನ ದೌರ್ಬಲ್ಯಗಳನ್ನು ಬೇರೆಯವರೊಂದಿಗೆ ಹೇಳಿಕೊಳ್ಳದಷ್ಟು ಅಭಿಮಾನವಿರುತ್ತದೆ. ಕತೆಯ ಕೊನೆಯ ಸಾಲುಗಳಂತೂ ಇಡೀ ಸಂಪ್ರದಾಯವನ್ನೇ ಅಣಕಿಸುವಂತೆ ಈ ಮದುವೆ, ಈ ಸೀಮಂತ, ಗಂಡ ಮುಂತಾದವುಗಳಿಗೆ 'ಇವೆಲ್ಲಕ್ಕೂ ಅರ್ಥವಿಲ್ಲ' ಎಂದು ಹೇಳುವುದು ಲೇಖಕನ ಆಧುನಿಕ ಪ್ರಜ್ಞೆಯನ್ನು ತೋರಿಸುತ್ತದೆ.

'ಶ್ರವಣ' ಕತೆಯಲ್ಲಿ ಗುರುಶಿಷ್ಯೆಯರು ತಮ್ಮ ಅನುಭವಗಳನ್ನು ಪರಸ್ಪರ ಹಂಚಿಕೊಳ್ಳುತ್ತಾರೆ. ಇವರ ಸಂಬಂಧ ಎಷ್ಟರಮಟ್ಟಿಗೆ ಎಂದರೆ ತಮ್ಮ ಪ್ರಿಯಕರರ ಬಗ್ಗೆ ನಗುನಗುತ್ತಲೇ ಮಾತನಾಡುತ್ತಾರೆ. ಶಕುಂತಲೆ ಈಗಾಗಲೇ ಒಂದು ಪ್ರಣಯದ ಅನುಭವ ಪಡೆದಿದ್ದವಳು. ತನ್ನ ಶಿಷ್ಯೆಯಾದ ಸವಿತಾಗೆ ಈ ರೀತಿಯ ಪ್ರೀತಿ ಪ್ರಣಯಗಳ ಬಗ್ಗೆ ಎಚ್ಚರಿಕೆಯನ್ನು ನೀಡುತ್ತಾಳೆ. ತನ್ನ ಪ್ರಿಯಕರನೊಂದಿಗಿನ ಯಾತನೆಯನ್ನು ಹೇಳಿಕೊಳ್ಳುತ್ತಾಳೆ. ಪ್ರೀತಿಸುವ ವೇಳೆಯಲ್ಲಿ ಕೇವಲ ಅರ್ಥವಿಲ್ಲದ ಭರವಸೆಗಳು ಇರುತ್ತವೆ. ಇವೆಲ್ಲ ಸತ್ಯವಲ್ಲ ಎಂದು ಹೇಳುವಲ್ಲಿ ಜೀವನಾನುಭವವಿದೆ. ತಾನು ಎಷ್ಟೆಲ್ಲಾ ಯಾತನೆಗಳನ್ನು ಅನುಭವಿಸಿದಾಗ್ಯೂ ಹೊಸಬದುಕಿಗೆ ಹೊಸ ಸಂಬಂಧಗಳಿಗೆ ತೆರೆದುಕೊಳ್ಳಲು ಪ್ರಾರಂಭಿಸುತ್ತಾಳೆ. ಆದ್ದರಿಂದಲೇ ಈಗ ತನ್ನನ್ನು ಅತಿಯಾಗಿ ಪ್ರೀತಿಸುತ್ತಿರುವ ಜಗದೀಶನನ್ನು ಮತ್ತೆ ಪ್ರೀತಿಸಲು ಪ್ರಾರಂಭಿಸುತ್ತಾಳೆ. ಇದಕ್ಕಾಗಿ ಇವಳು ಇಡೀ ಕುಟುಂಬದ ಸದಸ್ಯರನ್ನು ಎದುರಿಸಲು ಸಿದ್ಧಳಾಗುತ್ತಾಳೆ. ಇದಕ್ಕಾಗಿ ಈಗ ಇವಳ ಮನಸ್ಸಿನಲ್ಲಿ ಜಾತಿ, ಮತ, ವಯಸ್ಸು, ಅಂತಸ್ತು ಮುಂತಾದವುಗಳನ್ನು ದಾಟಿ ಬದುಕುವ ಚೈತನ್ಯವನ್ನು ಪಡೆಯುತ್ತಾಳೆ. ತಾನು ಹೆಣ್ಣಾಗಿದ್ದು ತನ್ನ ಮನಸ್ಸಿಗೆ ಹಿಡಿಸಿದ್ದನ್ನು ತನ್ನ ಆಸೆಗಳನ್ನು ಪೂರೈಸಿಕೊಳ್ಳಲು ಮಾರ್ಗ ಕಂಡುಕೊಳ್ಳುತ್ತಾಳೆ.

'ಹುತ್ತ' ಅತೀಚಿಕ್ಕವಯಸ್ಸಿನ ಹುಡುಗನೊಂದಿಗೆ ಅವನಿಗಿಂತಲೂ ಹೆಚ್ಚು ವಯಸ್ಸಾದ ಸ್ತ್ರೀಯು ತನ್ನ ಲೈಂಗಿಕ ಬಯಕೆಗಳನ್ನು ಈಡೇರಿಸಿಕೊಳ್ಳುವ ವಿಫಲಯತ್ನವನ್ನು ಚಿತ್ರಿಸುತ್ತದೆ. ಕತೆಯ ನಿರೂಪಕ ತಾನು ಪ್ರೀತಿಸಿದ ತನ್ನ ಸಹಪಾಠಿಯಾದ ಸುಮಿತ್ರಾಳ ತಾಯಿಯೊಂದಿಗೆ ಆತ್ಮೀಯತೆಯ ಸಂಬಂಧವನ್ನು ಬೆಳೆಸಿಕೊಳ್ಳುತ್ತಾನೆ. ಈ ಸ್ತ್ರೀಯ ಆತ್ಮೀಯತೆಯೇ ಕೊನೆಗೆ ಅವಳಿಂದ ವಿಚಿತ್ರವಾದ ಲೈಂಗಿಕ ಬಯಕೆಯನ್ನು ವ್ಯಕ್ತಪಡಿಸುತ್ತದೆ. ಇವಳು ತನ್ನ ಗಂಡನಿಂದ ಯಾವುದೋ ಕಾರಣಕ್ಕಾಗಿ ದೂರವಾಗಿರುತ್ತಾಳೆ. ಮತ್ತು ತನ್ನ ಮಗಳೊಂದಿಗೆ ಒಂಟಿ ಜೀವನ ಸಾಗಿಸುತ್ತಿದ್ದಾಳೆ. ಒಂದು ದಿನ ಅನಿರೀಕ್ಷಿತವಾಗಿ ಅವಳ ಮನೆಯಲ್ಲಿ ತಂಗಿದ್ದಾಗ ಎಷ್ಟೋದಿನದಿಂದ ಅದುಮಿಟ್ಟುಕೊಂಡಿದ್ದ ಲೈಂಗಿಕ ಬಯಕೆಗಳು ಮರುಕುಳಿಸಿ ನಿರೂಪಕನೊಂದಿಗೆ ಕೂಡಲು ಪ್ರಯತ್ನಿಸತ್ತಾಳೆ.

ಇದು ವಯಸ್ಸಾದ ಸ್ತ್ರೀಯೊಬ್ಬಳ ದೌರ್ಬಲ್ಯವನ್ನು ಚಿತ್ರಿಸುತ್ತೆಯಾದರೂ ಇದಕ್ಕೆ ಕಾರಣ ತನ್ನ ಎಲ್ಲಾ ಸಂಬಂಧಗಳೂ ಚದುರಿ ಹೋಗುವುದು ತನ್ನ ಗಂಡನಿಂದಲೂ ದೂರವಾಗುತ್ತಾಳೆ. ತನ್ನ ಮಗ ವ್ಯಾಪಾರಕ್ಕೆಂದು ಮುಂಬೈಗೆ ಹೋಗಿ ಪೋಲಿಯಾಗಿರುತ್ತಾನೆ. ತನ್ನ ಮಗಳು ಆಗಾಗ ತನ್ನ ತಂದೆಯ ಬಳಿಗೆ ಹೋಗಿಬರುತ್ತರುತ್ತಾಳೆ. ಆಗ ಒಂಟಿತನ ಇವಳನ್ನು ಕಾಡುತ್ತದೆ. ಇದರಿಂದಾಗಿಯೇ ಕುಡಿಯುವುದು ಮತ್ತು ಅನೈತಿಕ ಸಂಬಂಧಗಳ ಬಯಕೆಯನ್ನು ವ್ಯಕ್ತಪಡಿಸುತ್ತಾಳೆ.

'ಹುತ್ತ' ಕತೆಯಲ್ಲಿ ಬರುವ ನಿರೂಪಕನ ಮುಗ್ಧತೆಯೆ 'ಆಗುಂತಕ' ದಲ್ಲಿಯೂ ಕಂಡುಬರುತ್ತದೆ. ಇಲ್ಲಿ ಕಿಟ್ಟಿ ಸಾವಿನ ಬರುವಿಕೆಯನ್ನು ನೆನಪಿಸುತ್ತಾನೆ. ಅಂದು ಕಿಟ್ಟಿ ತುಂಬಾ ಪ್ರೀತಿಸುತ್ತಿದ್ದ ತಾಯಿ ಮತ್ತು ಅಜ್ಜಿ ಇಬ್ಬರೂ ಪರಸ್ಪರ ಜಗಳವಾಡುತ್ತಾರೆ. ತಾಯಿ ಈ ಸಮಯದಲ್ಲಿ ಸಾವಿನ ಬಗ್ಗೆ ಮಾತನಾಡುತ್ತಾಳೆ. ಕತೆಯಲ್ಲಿ ಮಲ್ಲಪ್ಪನ ಮಗಳು ಅಂತರ್‌ಜಾತಿ ವಿವಾಹವಾಗಿ ತಂದೆ ಸಾಯುತ್ತ ಬಿದ್ದಿದ್ದರೂ ಬಂದು ನೋಡುವುದಿಲ್ಲ. ಪ್ರೀತಿ, ಕ್ರೌರ್ಯ, ಭಯ, ಯಾತನೆ, ರೋಗ-ರುಜಿನೆ ಎಲ್ಲವೂ ಕಿಟ್ಟಿಯ ಮುಗ್ಧ ಮನಸ್ಸಿನ ಮೇಲೆ ಪರಿಣಾಮ ಬೀರುತ್ತವೆ. ಕತೆಯಲ್ಲಿ ಎದ್ದುಕಾಣುವ ವಿಷಯವೇ ಸಾವಿನ ಭೀರಕರತೆ. ಅಪಾರವಾದ ಪ್ರೀತಿಯನ್ನು ಹೊಂದಿದ್ದ ಅಜ್ಜನ ಸಾವು ಕಿಟ್ಟಿಗೆ ಮರೆಯಲಾರದ ಸಂಗತಿಯಂತೆ ಇರುತ್ತದೆ. ಇದರಿಂದ ದುಗುಡ, ಅಳು, ಹಿಂಸೆ, ಯಾತನೆಗೆ ಗುರಿಮಾಡುತ್ತದೆ. ಇಲ್ಲಿ ಬರುವ ಅಜ್ಜಿಯ ಜಗಳ, ಅಪ್ಪ ಅವ್ವನನ್ನು ಸಾಯುವಂತೆ ಹೊಡೆಯುವುದು ತನ್ನ ತಾಯಿ ಸಾವಿನ ಬಗ್ಗೆ ರೊಚ್ಚಿನಿಂದ ಮಾತನಾಡುವುದು ಅಜ್ಜನ ಸಾವಿಗೆ ಇವೇ ಕಾರಣವಾಗಿರುತ್ತವೆ. ಕತ್ತಲಲ್ಲಿ ನಡೆಯುವ ಶವಸಂಸ್ಕಾರದ ಸಮಯದಲ್ಲಿ ನಡೆಯುವ ರೋಧನ ಕಿಟ್ಟಿಯನ್ನು ತೀವ್ರವಾಗಿ ಕಾಡುತ್ತದೆ. ಮತ್ತು ಇದರ ಭಯಂಕರತೆಗೆ ಜೋರಾಗಿ ಚೀರಿ ಪ್ರಜ್ಞೆ ತಪ್ಪಿ ಬೀಳುತ್ತಾನೆ.

'ಫಿನೀಕ್ಸ್' ಅತ್ಯಂತ ಜನಪ್ರಿಯವಾದ ಕತೆಯಾಗಿದೆ. ನವ್ಯ ಸಾಹಿತ್ಯದಿಂದ ಪ್ರೇರಣೆ ಪಡೆದ ಆಲನಹಳ್ಳಿ ಅವರು ಈ ಹಿನ್ನೆಲೆಯಲ್ಲಿ ಮಾನವ ಸಂಬಂಧಗಳನ್ನು ಚಿತ್ರಿಸಿದ್ದಾರೆ. ಇಲ್ಲಿ ಬರುವ ನಿರೂಪಕ ಹಳ್ಳಿಯವನಾಗಿದ್ದು ಶೂದ್ರವರ್ಗಕ್ಕೆ ಸೇರಿದವನಾಗಿದ್ದಾನೆ. ಇಲ್ಲಿ ಬರುವ ಸ್ತ್ರೀಯರು ಬ್ರಾಹ್ಮಣ ಕುಟುಂಬದಿಂದ ಬಂದಿದ್ದು ಹೊಸ ಬದುಕಿನ ಹೊಸ ಅನುಭವಗಳಿಗೆ ಆತೊರೆಯುತ್ತದೆ. ನಿರೂಪಕನಿಗೆ ಮನಸ್ಸು ಕೊಟ್ಟು, ಜಾತಿ, ವಯಸ್ಸು, ಸಾಂಪ್ರದಾಯಿಕ ಮಡಿವಂತಿಕೆ ಇವೆಲ್ಲವನ್ನು ಮರೆಯುತ್ತಾರೆ. ಮತ್ತು ಇವನೊಂದಿಗೆ ಲೈಂಗಿಕ ಸಂಬಂಧ ಇಟ್ಟುಕೊಳ್ಳುತ್ತಾರೆ. ಇಲ್ಲಿ ಸ್ತ್ರೀಯೇ ಪುರುಷನಿಗೆ ಲೈಂಗಿಕತೆಗೆ ಪ್ರಚೋದಿಸುತ್ತಾಳೆ. ಪ್ರೀತಿ, ಪ್ರೇಮ, ಕಾಮ ಇವುಗಳ ಸುತ್ತಲೂ ಇರುವ ಮನುಷ್ಯ ಯಾವುದೇ ಜಾತಿ, ಧರ್ಮ, ವಯಸ್ಸು, ಅಂತಸ್ತು ಮುಂತಾದವುಗಳಿಗೆ ಬೆಲೆ ಕೊಡುವುದಿಲ್ಲ. ಇಲ್ಲಿನ ನಿರೂಪಕ ಈ ಇಬ್ಬರು ಹೆಣ್ಣುಗಳ ನಡುವೆ ಯಾರನ್ನೂ ಮದುವೆಯಾಗದೆ ಕೇವಲ ಅವರೊಂದಿಗೆ ದೈಹಿಕ ಸಂಬಂಧವನ್ನು ಬಯಸುತ್ತಾನೆ. ಆದರೂ ಮದುವೆಯಾಗುವ ಬಯಕೆ ಉಂಟಾದಾಗ ಈ ಇಬ್ಬರಲ್ಲಿ ಯಾರನ್ನು ಮದುವೆಯಾಗಬೇಕು ಎಂಬ ದ್ವಂದ್ವದಲ್ಲಿ ಉಳಿಯುತ್ತಾನೆ. ತನ್ನಿಂದಾಗಿ ಅಬಾರ್ಷನ್ ಮಾಡಿಸಿಕೊಂಡವಳನ್ನು ಮದವೆಯಾಗಲು ಇಷ್ಟಪಡುವುದಿಲ್ಲ. ತಾನು ಪ್ರೀತಿಸಿದ ಹುಡುಗಿಯೊಂದಿಗೆ ಮಾತ್ರ ಮದುವೆಗೆ ಇಚ್ಚಿಸುತ್ತಾನೆ. ಕೊನೆಗೆ ಇವಳೂ ಅವನ ಉದ್ದೇಶವನ್ನು ಅರಿತು ಕೇವಲ ದೈಹಿಕ ಸುಖ ಬಯಸುವ ಇವನನ್ನು ಮದುವೆಯಾಗಲು ಇಚ್ಚಿಸುವುದಿಲ್ಲ. ಆಗ ಇವನ ಎಲ್ಲಾ ಲೈಂಗಿಕ ಬಯಕೆಗಳು ಫಿನೀಕ್ಸಂ ಹಕ್ಕಿಯಂತೆ ಸುಟ್ಟು ಮರುಜೀವ ಪಡೆದು ಬಾಲಕನಂತೆ ಪಶ್ಚಾತ್ತಾಪಗೊಂಡು ದುಃಖಿಸುತ್ತಾನೆ.

'ಫಿನೀಕ್ಸ್'ನಲ್ಲಿ ಬರುವ ವಿಚಿತ್ರ ಸಂಬಂಧ ಲೈಂಗಿಕ ಬಯಕೆ, ಆಕರ್ಷಣೆಗಳು, ಸೂಕ್ಷ್ಮವಾಗಿ ಕಾಣುವ ಲೈಂಗಿಕ ಸ್ವಾತಂತ್ರ್ಯದ ಚಿತ್ರಣ, 'ಗೀಜಗನಗೂಡು' ಕತೆಯಲ್ಲಿಯೂ ಕಂಡುಬರುತ್ತದೆ. ಇದು ಮೇಲಿನ ಎಲ್ಲಾ ಕತೆಗಳಿಗಿಂತ ವಿಭಿನ್ನವಾಗಿದೆ. ಇಲ್ಲಿನ ನಿರೂಪಕನ ಸಂವೇದನೆಗಳು ಮನುಷ್ಯನ ನಡುವಿನ ಸಂಬಂಧಗಳ ಪಲ್ಲಟವನ್ನು ಸೂಚಿಸುತ್ತದೆ. ಇಲ್ಲಿನ ನಿರೂಪಕನೂ ಬರಹಗಾರನಾಗಿದ್ದಾನೆ. ಸಂಶೋಧಕನಾಗಿದ್ದಾನೆ. ಇವನು

ರಷ್ಯಾದ ತರುಣಿಯೊಂದಿಗೆ ಸ್ನೇಹವನ್ನು ಬಯಸುತ್ತಾನೆ. ಆದರೆ ಅದು ಪ್ರೇಮಕ್ಕೆ ತಿರುಗುತ್ತದೆ. ಇಲ್ಲಿ ಕಾಡಿನಲ್ಲಿರುವ ಆದಿವಾಸಿಗಳ ಬದುಕು ನೈಜವಾಗಿ ಚಿತ್ರಣಗೊಂಡಿದೆ. ರಷ್ಯಾದ ಹೆಣ್ಣು ಯಾರನ್ನು ತನ್ನ ಗಂಡ ಎಂದು ಕರೆದುಕೊಂಡು ಬಂದಿದ್ದಳೋ ಅವಳೊಂದಿಗೆ ಅಸಹ್ಯ ಭಾವನೆಯನ್ನು ಹೊಂದುತ್ತಾಳೆ. ಜೊತೆಗೆ ನಿರೂಪಕನ ಅನಿರೀಕ್ಷಿತ ಸಂಬಂಧ ಸ್ನೇಹದ ಜೊತೆಗೆ ಪ್ರೀತಿಯನ್ನು ನೀಡುತ್ತದೆ. ತನ್ನ ಗಂಡ ಎಂದು ಪರಿಚಯಿಸಿದ ಪೋವೆಲ್‌ನನ್ನು ಶಂಡನಂತೆ ಭಾವಿಸಿ ಅವನೊಂದಿಗೆ ಇರಲು ಇಚ್ಛಿಸದೆ ನಿರೂಪಕನನ್ನು ಬಯಸುತ್ತಾಳೆ. ನಿರೂಪಕನನ್ನು ಕಂಡು Oh, my Sweet boy ಎಂದು ಅವನನ್ನು ರಮಿಸುತ್ತಾಳೆ. ಇದು ಪೋವೆಲ್‌ನಿಗೆ ತಡೆಯಲಾರದ ಸಿಟ್ಟು, ಯಾತನೆಯನ್ನು ಉಂಟುಮಾಡುತ್ತದೆ. ಪೋವೆಲ್ ಇವಳನ್ನು ತೊರೆದು ಹೋಗುವಂತೆ ಹೋಗುತ್ತಾನೆ. ಆದರೂ ಇವನ ದುರ್ಬಲ ಮನಸ್ಸು ಅವಳನ್ನು ಕಳೆದುಕೊಳ್ಳಲು ಇಚ್ಛಿಸುವುದಿಲ್ಲ. ರಷ್ಯಾದ ಹೆಣ್ಣಿನ ಲೈಂಗಿಕ ಸ್ವಾತಂತ್ರ್ಯ ಎಷ್ಟಿದೆ ಎಂದರೆ ಇವಳು ನಿರೂಪಕನೊಂದಿಗೆ ಕಳೆದ ಹಲವು ಲೈಂಗಿಕ ಅನುಭವಗಳನ್ನು ತನ್ನ ಗಂಡನಿಗೆ ಹೇಳುತ್ತೇನೆ ಎನ್ನುವಷ್ಟು. ಇದನ್ನು ಕೇಳಿ ಪೋವೆಲ್ ವಿಚಲಿತನಾಗುತ್ತಾನೆ. ಈ ಕತೆ ಪೋವೆಲ್‌ನನ್ನು ಕೇವಲ ಕುಡಿಯುವುದು, ಸೀಗರೇಟ್ ಸೇದುವುದು ಮುಂತಾದವುಗಳಲ್ಲೇ ಮಲಗಿಸುತ್ತದೆ. ಆದರೆ ನಿರೂಪಕ ಮತ್ತು ರಷ್ಯಾದ ಹೆಣ್ಣು ವಾಸ್ತವವಾಗಿ ದಕ್ಕುವ ಎಲ್ಲಾ ಅನುಭವಗಳನ್ನು ಅನುಭವಿಸುತ್ತಾರೆ. ಇವರಿಬ್ಬರ ನಡುವಿನ ಸಂಬಂಧ ಗೀಜಗನಗೂಡಿನ ಎರಡು ಗೀಜಗದ ಹಕ್ಕಿಗಳ ಸಂಬಂಧದಂತೆ ಕಂಡುಬರುತ್ತದೆ. 

'ಇನ್ನೊಂದು ಪ್ರಣಯ ಪ್ರಸಂಗ' ಕತೆಯಲ್ಲಿ ಗುರುಶಿಷ್ಯರ ಸಂಬಂಧದ ಜೊತೆಗೆ ಇವರ ಪ್ರಣಯವೂ ಪ್ರಧಾನವಾಗಿದೆ. ನಿರೂಪಕನು ತನ್ನ ವಿದ್ಯಾರ್ಥಿ ಜಿವನದಲ್ಲಿ ಉಂಟಾದ ಲೈಂಗಿಕ ಆಕರ್ಷಣೆಯ ನಿರೂಣೆಯಾಗಿದೆ. ಈ ಕತೆಯಲ್ಲಿ ಹೆಣ್ಣುಗಂಡಿನ ಸಂಬಂಧ ಎರಡು ಭಾಗವಾಗಿ ಕಂಡುಬರುತ್ತದೆ. ನಿರೂಪಕ ಒಬ್ಬ ಪ್ರತಿಭಾನ್ವಿತ ವಿದ್ಯಾರ್ಥಿ ಅಧ್ಯಾಪಕಿಯಾದ ಪಲ್ಲವಿಗೂ ಇವನಿಗೂ ಸ್ನೇಹ ಬೆಳೆಯುತ್ತದೆ. ಇದು ಬಂಡಿಪುರದ ಪ್ರವಾಸದಲ್ಲಿ ಪ್ರೇಮಕ್ಕೆ ತಿರುಗುತ್ತದೆ. ಮತ್ತು ಇಬ್ಬರೂ ಒಂದಾಗುತ್ತಾರೆ. ತನ್ನ ಅತೀವವಾದ ಲೈಂಗಿಕ ಬಯಕೆಗಳನ್ನು ಈಡೇರಿಸಿಕೊಳ್ಳಲು ಪಲ್ಲವಿಯನ್ನು ಮದುವೆಯಾಗಲು ಇಚ್ಛಿಸಿದಾಗ ಅವಳು ನಿರಾಕರಿಸಿ ಮದುವೆಯಂತ ಕೆಟ್ಟ ಆಚರಣೆ ತಮ್ಮ ಪ್ರೇಮವನ್ನು ಬಲಿಕೊಡುವುದು ಬೇಡ ಎನ್ನುವಂತೆ ಮಾತನಾಡುತ್ತಾಳೆ. ಇಲ್ಲಿಯೂ ಸಹ ಗೀಜಗದ ಗೂಡು, ಆಗುಂತಕ, ಫಿನೀಕ್ಸ್ ಕತೆಗಳಂತೆ ಯಾವುದೇ ಜಾತಿ, ವಯಸ್ಸು, ಅಂತಸ್ತುಗಳಿಗೆ ಬೆಲೆಕೊಡುವುದಿಲ್ಲ. ಇದು ಒಂದು ಭಾಗವಾದರೆ ಇವರಿಬ್ಬರೂ ಮದುವೆಯಾಗಿ ಬೇರೆ ಬೇರೆಯಾಗುತ್ತಾರೆ. ಎಂಟು ವರ್ಷದ ನಂತರ ಮತ್ತೇ ಇಬ್ಬರೂ ಸೇರಿದಾಗ ಈ ಇಬ್ಬರಿಗೂ ಮದುವೆಯಾಗಿದ್ದಾಗಿನ ಹರೆಯದವರ ಉತ್ಸಾಹ ಇವರಲ್ಲಿ ಕಂಡುಬರುತ್ತದೆ. ಇಲ್ಲಿ ಪಲ್ಲವಿ ತನ್ನ ಗಂಡನಿದ್ದಾಗ್ಯೂ ಯಾವುದೇ ದ್ವಂದ್ವವನ್ನು ಕಾಣದೇ ನಿರೂಪಕನೊಂದಿಗೆ ಮತ್ತೆ ಸಂಬಂಧ ಬೆಳೆಸುತ್ತಾಳೆ. ಮತ್ತು ಅವನೊಂದಿಗೆ ಕೂಡುತ್ತಾಳೆ. ಇವರಿಬ್ಬರೂ ಚಂಚಲ ಮನಸ್ಸಿನ ಸ್ವಭಾವದವರು. ಇವರಿಬ್ಬರು ಹಾತೊರೆಯುವುದು ಕೇವಲ ದೈಹಿಕ ತೃಷೆಯನ್ನು ಪೂರೈಸಿಕೊಳ್ಳುವುದಕ್ಕಾಗಿ ಎಂಬುದು ಕತೆಯಲ್ಲಿ ಕಂಡುಬರುತ್ತದೆ. ವಿಶ್ವಾಸ, ಸ್ನೇಹ, ಪ್ರೀತಿ ಇವುಗಳಿಗೆ ಈ ಇಬ್ಬರಲ್ಲಿಯೂ ಅರ್ಥವಿಲ್ಲ. ಅಷ್ಟೊಂದು ಪ್ರಾಧಾನ್ಯತೆ ನೀಡುವುದಿಲ್ಲ ಎಂಬುದು ಕತೆಯನ್ನು ಓದಿದ ಎಲ್ಲಾ ಓದುಗರಿಗೂ ದಕ್ಕುವಂತಹ ಅರ್ಥವು ಕತೆಯಲ್ಲಿದೆ.

'ಸುಟ್ಟತಿಕದ ದೇವರು' ಕತೆ ಓದುಗರನ್ನು ಹೆಚ್ಚು ಆಕರ್ಷಿಸುತ್ತದೆ. ತನ್ನ ಮಗನಾದ ಮಾದಪ್ಪನಿಗೆ ದೊಡ್ಡವರು ಮದುವೆ ಮಾಡುತ್ತಾರೆ. ಊರಿಗೆ ಬಂದ ದಿನವೇ ಯಾವುದೇ ಮುಜುಗರವಿಲ್ಲದೇ ಚಿನ್ನಮ್ಮ ನೀರುತರಲು ಬಾವಿಗೆ ಹೋಗುತ್ತಾಳೆ. ಇಲ್ಲಿ ಮಾದಪ್ಪ ಸುಟ್ಟತಿಕದ ದೇವರು ಎಂದು ಪ್ರಸಿದ್ಧನಾಗಿದ್ದರೂ ಇವನು ಕೆಲವು ದೌರ್ಬಲ್ಯಗಳನ್ನು ಹೊಂದಿದ್ದಾನೆ. ತನ್ನ ಹೆಂಡತಿಗೆ ಸರಿಯಾದ ಲೈಂಗಿಕ ಸುಖಕೊಡದ ಅಸಮರ್ಥ. ದೊಡ್ಡವರು ತನ್ನ ಮಗನನ್ನು ಚಿಕ್ಕಂದಿನಿಂದ ಅತ್ಯಂತ ಪ್ರೀತಿಯಿಂದಲೇ ಸಾಕಿರುತ್ತಾರೆ. ಇವರೇ ಇವನಿಗೆ ತಾಯಿ-ತಂದೆ ಎಲ್ಲವೂ ಆಗಿ ಊರಿನ ಜನ ಹೆಮ್ಮೆಪಡುವಂತೆ 'ತಬ್ಬಲಿ ಮಗನನ್ನು ಹೆಬ್ಬುಲಿಯಂತೆ ಬೆಳೆಸಿದ್ದಾರೆ' ಎಂದುಕೊಳ್ಳುತ್ತಾರೆ. ದೊಡ್ಡವರು

ತಮ್ಮ ಯೌವನಾವಸ್ಥೆಯಲ್ಲೇ ಎರಡನೇ ಹೆಂಡತಿಯನ್ನೂ ಕಳದುಕೊಳ್ಳುತ್ತಾರೆ. ಆದರೂ ಇವರು ಮತ್ತೊಂದು ಮದುವೆಯನ್ನು ಬಯಸುವುದಿಲ್ಲ. ಬೇಸಾಯದ ಸಮಯದಲ್ಲಿ ತನ್ನ ಮಗಳ ವಯಸ್ಸಿನವಳಾದ ತನ್ನ ಸೊಸೆ ಅರೆಬೆತ್ತಲೆ ದೇಹವನ್ನು ನೋಡಿ ದೊಡ್ಡವರು ತತ್ತರಿಸುತ್ತಾರೆ. ಗಂಡು ಹುಡುಗನಂತೆ ಕೆಲಸ ಮಾಡುವುದು ಕಂಡು ಆಶ್ಚರ್ಯಪಡುತ್ತಾರೆ. ಸುಮಾರು ವರ್ಷಗಳವರೆಗೆ ಒಂಟಿಜೀವನ ಸಾಗಿಸಿದ್ದ ಮತ್ತು ಯಾವುದೇ ಹೆಣ್ಣಿನ ಸಹವಾಸವನ್ನು ಮಾಡದೇ ತನ್ನ ಲೈಂಗಿಕತೆಯನ್ನು ನಿಗ್ರಹಿಸಲು ಪ್ರಯತ್ನಿಸಿದವರು ಈಗ ಅದನ್ನು ಸಡಿಲಗೊಳಿಸುವಂತೆ ತನ್ನ ಸೊಸೆಯೊಂದಿಗೆ ಕೂಡುತ್ತಾರೆ. ಇದಕ್ಕೆ ಸೊಸೆ ಚಿನ್ನಮ್ಮ ಯಾವುದೇ ವಿರೋಧ ವ್ಯಕ್ತಪಡಿಸದಂತೆ ಸಹಕರಿಸುತ್ತಾಳೆ. ಈ ವಿಷಯ ಊರಿಗೆಲ್ಲಾ ತಿಳಿದು ಮಾದಪ್ಪ ದೇವರಿಗೂ ತಿಳಿಯುತ್ತದೆ. ತನ್ನ ತಂದೆ ಮತ್ತು ಇವರ ಮಗಳ ವಯಸ್ಸಿನ ಸೊಸೆಯೊಂದಿಗೆ ಸಂಬಂಧ ಇವನಲ್ಲಿ ಅವಮಾನ, ಹಿಂಸೆ, ದ್ವೇಷ ಮುಂತಾದವುಗಳಿಗೆ ಕಾರಣವಾಗುತ್ತದೆ. ಈ ಅವಮಾನವನ್ನು ಸಹಿಸಲಾರದ ದೇವರು ಜಾತ್ರೆಯ ದಿನದಂದು ಜಾತ್ರೆಯ ಸದ್ದು ಮತ್ತು ರಣಬಿಸಿಲಿನಲ್ಲಿ ತುಂಬು ಬಸುರಿಯಾಗಿದ್ದ ಚಿನ್ನಮ್ಮಳನ್ನು ಬಲಿತೆಗೆದುಕೊಳ್ಳುತ್ತಾನೆ. ತನ್ನ ಗಂಡನಿಂದ ಸಿಗದ ಲೈಂಗಿಕ ತೃಪ್ತಿಯೇ ಇವಳ ಈ ದುರಂತಕ್ಕೆ ಕಾರಣವಾಗಿ ಗಂಡನಿಂದಲೇ ಕೊಲೆಯಾಗುತ್ತಾಳೆ. ತನ್ನ ಹೆಂಡತಿಯ ಅನೈತಿಕತೆ ತನ್ನ ಸ್ವಾಭಿಮಾನ, ಮರ್ಯಾದೆಯ ವಿಷಯವೆಂದು ತಿಳಿದಿದ್ದು ದೇವರು ಮಾದಪ್ಪ ಈ ನಿರ್ಧಾರಕ್ಕೆ ಬರುತ್ತಾನೆ. ಈಗಿನ ಆಧುನಿಕ ಕಾಲದಲ್ಲಿ ಈ ರೀತಿಯ ಘಟನೆಗಳು ನಡೆಯುತ್ತಿರುವುದನ್ನು ಕಾಣುತ್ತೇವೆ. ತನ್ನ ಹೆಂಡತಿಯ ಅನೈತಿಕತೆ ತಿಳಿದಾಗ ಬರ್ಬರವಾಗಿ ಸಾಯಿಸುವ ಪ್ರವೃತ್ತಿಯ ವಿಕೃತ ಮನಸ್ಸಿನ ಭಾವನೆಗಳನ್ನು ಹೊರಹಾಕುವ ವಿಧಾನವಾಗಿ ಕಂಡುಬರುತ್ತದೆ.

'ಸಂಬಂಧ' ಕತೆಯು ನವ್ಯ ಕತೆಗಳಲ್ಲಿ ಅತ್ಯಂತ ಶ್ರೇಷ್ಠಕತೆಗಳಲ್ಲೊಂದು. ಇದು ಇತರ ಕತೆಗಳಲ್ಲಿರುವಂತೆ ದ್ವೇಷ, ಅಸೂಯೆ, ಕ್ರೌರ್ಯ, ಅಸಹಾಯಕತೆ, ರಕ್ತಪಾತ ಮುಂತಾದವುಗಳಿಂದ ಹೊರಗೆ ನಿಂತು ಮನುಷ್ಯ ಸಂಬಂಧಗಳನ್ನು ಹೇಳುವ ಕಥೆಯಾಗಿದೆ. ಮಾನವೀಯತೆಯೇ ಒಂದು ಶ್ರೇಷ್ಠ ಮೌಲ್ಯ ಎಂದು ಕಥೆಯು ನಿರೂಪಿಸುತ್ತದೆ. ಈ ಕತೆಯಲ್ಲಿ ನವೋದಯದ ಕತೆಗಳಂತೆ ಮೌಲ್ಯಗಳು, ಮಾನವೀಯತೆ, ಪ್ರೀತಿ, ಅಂತಃಕರಣ ಮುಂತಾದವುಗಳಿಂದ ಕೂಡಿರುವುದು ಓದುಗರಿಗೆ ಅರ್ಥವಾಗುತ್ತದೆ. ಇಲ್ಲಿ ಬರುವ ನಿರೂಪಕ ಶೂದ್ರವರ್ಗದವನಾಗಿದ್ದು ಇವನ ಬಾಲ್ಯಸ್ನೇಹಿತೆ ಲಲಿತ ಬ್ರಾಹ್ಮಣಳು. ಈ ಕತೆ ಲಲಿತಾಳ ಸುತ್ತಲೂ ಸುತ್ತುತ್ತಿರುವುದು ಕಂಡುಬರುತ್ತದೆ. ನಿರೂಪಕ ಇನ್ನೂ ವಿದ್ಯಾಭ್ಯಾಸ ಮಾಡುತ್ತಿರುವಾಗಲೇ ವಿವಾಹವಾದ ಲಲಿತಾ ಎಷ್ಟೋ ವರ್ಷದ ನಂತರ ನಿರೂಪಕನನ್ನು ಸಂಧಿಸುತ್ತಾಳೆ. ಆಗ ಅವಳ ಸ್ಥಿತಿ ಮೊದಲಿನಂತಿರದೆ ತೀರಾ ನಿಕೃಷ್ಟವಾಗಿರುತ್ತದೆ. ಬಾಲ್ಯದಲ್ಲಿ ಸುಂದರವಾಗಿದ್ದವಳು ಮದುವೆಯಾದ ಮೇಲೆ ತೀರಾ ಸೊರಗಿ ಹೋಗಿದ್ದು ನಾಯಿಕಡಿದ ತನ್ನ ಮಗಳೊಂದಿಗೆ ಆಸ್ಪತ್ರೆಯಲ್ಲಿ ಸಂಧಿಸುತ್ತಾರೆ. ಲಿಲತಳ ಗಂಡ ತುಂಬಾ ಕ್ರೂರಿಯಾಗಿರುತ್ತಾನೆ. ಯಾವುದೋ ಕಾರಣಕ್ಕಾಗಿ ತನ್ನ ತಂದೆ ಮತ್ತು ತನ್ನ ಗಂಡನೊಂದಿಗೆ ಜಗಳವಾಡಿರುತ್ತಾರೆ. ಗಂಡ ಇವಳನ್ನು ಹಿಂಸಿಸುತ್ತಿರುತ್ತಾನೆ. ಅವಳನ್ನು ಹೊಡೆಯುತ್ತಾನೆ, ಬಡಿಯುತ್ತಾನೆ. ತನ್ನ ಮಗಳು ನಾಯಿ ಕಡಿದು ಸಾಯುವಂತಾದರೂ ಅತ್ತು ಅತ್ತು ಸರಿಯಾಗುತ್ತದೆ ಎಂದು ನಿರ್ಲಕ್ಷ್ಯ ವಹಿಸುತ್ತಾನೆ. ನಿರೂಪಕ ಮತ್ತು ಲಲಿತಾಳ ಬಗ್ಗೆ ಸಂಶಯ ಪಟ್ಟು ಏನೋ ಕೊನೆಗೆ ಅವಳನ್ನು ಹೊಡೆಯುತ್ತಾನೆ. ನಾಯಿ ಕಡಿದ ಮಗುವೂ ಸಾಯುತ್ತದೆ. ಇದು ಮನೆಯ ಯಜಮಾನನ ಆಲಸ್ಯದ ಸಣ್ಣತನವನ್ನು ಸೂಚಿಸುತ್ತದೆ. ಮತ್ತು ಮನುಷ್ಯ ಸಂಬಂಧಗಳು ತರುವ ನೋವನ್ನು ಚಿತ್ರಿಸುತ್ತದೆ. ಇದು ಲಲಿತಾಳ ಅಸಹಾಯಕತೆ ಮತ್ತು ದುರಂತವನ್ನು ಓದುಗರಿಗೆ ನೀಡುತ್ತದೆ. ಶೂದ್ರನಾದ ನಿರೂಪಕನಿಗೂ ಬ್ರಾಹ್ಮಣಳಾದ ಲಲಿತಾಳ ಸೂಕ್ಷ್ಮಸಂಬಂಧವು ಹಲವು ಘಟನೆಗಳ ಮೂಲಕ ಓದುಗರ ಅನುಕಂಪಕ್ಕೆ ಒಳಗಾಗುತ್ತದೆ. ಇವನು ನಿರೂಪಕನಂತಹ ಮಾನವೀಯ ಮೌಲ್ಯವಿರುವ ವ್ಯಕ್ತಿಯನ್ನು ವಿರೋಧಿಸುವ ವ್ಯಕ್ತಿಯಾಗಿದ್ದಾನೆ. ಇವನಿಗೆ ನಿರೂಪಕನ ಬಗ್ಗೆ ಸಂಶಯ ಪ್ರಾರಂಭವಾಗುತ್ತದೆ. ಆದ್ದರಿಂದಲೇ ತನ್ನ ಹೆಂಡತಿಯ ಮೇಲೆ ಕ್ರೂರವಾಗಿ ಹಲ್ಲೆ ಮಾಡಿರುತ್ತಾನೆ. ಹೆಂಡತಿಯ ಒಳ್ಳೆಯತನ, ನಿರೂಪಕನ ಒಳ್ಳೆಯತನ

ಇವುಗಳಿಗೆ ಇವನಲ್ಲಿ ಯಾವುದೇ ಒಳ್ಳೆಯ ಅಭಿಪ್ರಾಯವಿಲ್ಲ. ಈ ಕತೆಯಲ್ಲಿ ಇವನ ಬದುಕು ಇವನ ಕುಟುಂಬಕ್ಕಾಗಿ ಅಲ್ಲ. ಬದಲಾಗಿ ಇವನು ವೈಯಕ್ತಿಕವಾಗಿ ಮಾತ್ರ ಬದುಕುತ್ತಿರುತ್ತಾನೆ. ತನಗೆ ಬಂದ ಸಮಸ್ಯೆಯನ್ನು ಸಮರ್ಥವಾಗಿ ನಿರ್ವಹಿಸಲಾರದ ದುರ್ಬಲ ಮನಸ್ಸಿನವನು. ಇವನು ನವ್ಯ ಸಂವೇದನೆಯನ್ನೊಳಗೊಂಡ ವ್ಯಕ್ತಿಯಾಗಿ ಕಂಡುಬರುತ್ತಾನೆ. ಬ್ರಾಹ್ಮಣ ಸಂಪ್ರದಾಯವನ್ನು ಅನುಸರಿಸಿದ ವ್ಯಕ್ತಿ ಅತ್ಯಂತ ಸಂಪ್ರದಾಯ ಕುಟುಂಬದಿಂದ ಬಂದ ಸುಶೀಲಳನ್ನು ಜೀತಗಾರರ ಸ್ಥಿತಯಲ್ಲಿ ಇಟ್ಟಿರುತ್ತಾನೆ. ಇದು ಬ್ರಾಹ್ಮಣ ಕುಟುಂಬದ ಕಲಹವನ್ನು ಚಿತ್ರಿಸುತ್ತದೆ. ಕಲೆಯ ಪ್ರಾರಂಭದಲ್ಲಿ ಕಂಡುಬರುವ ಬ್ರಾಹ್ಮಣ ಸಂಪ್ರದಾಯಗಳು ಕತೆಯ ಕೊನೆಯಲ್ಲಿ ಇವನಿಂದಾಗಿಯೇ ಕಂಡುಬರುವುದಿಲ್ಲ. ಕೊನೆಗೆ ಇವನ ಕುಟುಂಬ ಒಂದು ಅಸ್ಪೃಶ್ಯ ಕುಟುಂಬದ, ಇವನ ಹೆಂಡತಿ ಅಸ್ಪೃಶ್ಯ ಮಹಿಳೆಯಂತೆ ಕಂಡುಬರುತ್ತಾಳೆ. ಜವಾಬ್ದಾರಿ ಇಲ್ಲದ, ಹೆಂಡತಿಯನ್ನು ಉಪೇಕ್ಷಿಸುವ, ಸಂಸಾರದ ಕಡೆ ಕಿಂಚಿತ್ತೂ ಗಮನವಿಲ್ಲದ ದುರ್ಬಲ ವ್ಯಕ್ತಿ ಇವನು.

## ಅಡಿ ಟಿಪ್ಪಣಿಗಳು

೧. ಶ್ರೀಕೃಷ್ಣ ಆಲನಹಳ್ಳಿ, ಪರಸಂಗದ ಗೆಂಡೆ ತಿಮ್ಮ, ಪು. ೬೧

೨. ಶ್ರೀಕೃಷ್ಣ ಆಲನಹಳ್ಳಿ, ಪರಸಂಗದ ಗೆಂಡೆ ತಿಮ್ಮ, ಪು. ೧೫೪

೩. ಶ್ರೀಕೃಷ್ಣ ಆಲನಹಳ್ಳಿ, ಭುಜಂಗಯ್ಯನ ದಶಾವತಾರಗಳು, ಪು. ೧೪

೪. ಜಿ. ಬಿ. ಜೋಷಿ, ಪುಟ ಬಂಗಾರ, ಪು. ೮೦೧

೫. ಶ್ರೀಕೃಷ್ಣ ಆಲನಹಳ್ಳಿ, ಗೋಡೆ, ಪು. ೧೬

## ಅಧ್ಯಾಯ ಏಳು

# ಲೈಂಗಿಕ ಸಂಬಂಧಗಳ ನಡುವಿನ ಸಂಘರ್ಷಗಳು

'ಕಾಡು' ಕಾದಂಬರಿಯಲ್ಲಿ ಬರುವ ಪ್ರಮುಖ ವ್ಯಕ್ತಿ ಚಂದ್ರೇಗೌಡ ಕಮಲಮ್ಮಳೊಂದಿಗೆ ಹಲವು ವರ್ಷ ಸಂಸಾರ ಸಾಗಿಸಿದವನಾಗಿದ್ದರೂ ಮಕ್ಕಳಾಗಿರುವುದಿಲ್ಲ. ಇದರಿಂದ ಮನೆಯಲ್ಲಿ ಗಂಡ ಹೆಂಡತಿ ಇಬ್ಬರಿಗೂ ಜಗಳ ಎಂಬುದು ಕಾದಂಬರಿಯಲ್ಲಿ ಮೇಲುನೋಟಕ್ಕೆ ಕಾಣುತ್ತದೆ. ಇಡೀ ಕಾದಂಬರಿಯ ಉದ್ದಕ್ಕೂ ಕಮಲಮ್ಮಳೊಂದಿಗೆ ಒಂದು ದಿನವೂ ಪ್ರೀತಿಯಿಂದ ಹೆಂಡತಿಯೆಂಬ ಸೌಜನ್ಯಕಾದರೂ ಮಾತನಾಡುವುದಿಲ್ಲ. ಬರೀ ಅವಳನ್ನು ಬಡಿಯುವುದು, ಸಿಟ್ಟು, ಆಕ್ರೋಶವನ್ನು ತೋರಿಸುವುದು ಮಾಡುತ್ತಾನೆ. ಇದರಿಂದ ಅವಳು ಪ್ರತಿದಿನ ಕಣ್ಣೀರಿಡುತ್ತಾಳೆ. ಚಂದ್ರೇಗೌಡ ಹೊಸೂರಿನ ಬಸಕ್ಕನೊಂದಿಗೆ ಸಂಬಂಧ ಹೊಂದಿದ್ದು ಪ್ರತಿರಾತ್ರಿ ಅವಳೊಂದಿಗೆ ಕಾಲ ಕಳೆಯುತ್ತಾನೆ. ಇದು ಅವಳ ದುಃಖಕ್ಕೆ ಮತ್ತೊಂದು ಕಾರಣವಾಗಿದೆ.

"ಯಾವ ಜನ್ಮದಲ್ಲಿ ಏನು ಪಾಪ ಮಾಡಿದ್ನೊ ಅದಿನ್ನೂ ಮುಗ್ದಿಲ್ಲಾಂತ ಕಾಣಿಸ್ತದೆ"[1] ಎಂದು ನೊಂದುಕೊಳ್ಳುತ್ತಾಳೆ. ಊಳಿಗಮಾನ್ಯ ಪದ್ಧತಿಯಲ್ಲಿ ತಮ್ಮ ಪ್ರತಿಷ್ಠೆ ಹೆಚ್ಚಿಸಿಕೊಳ್ಳುವುದು ಮತ್ತು ಉಳಿಸಿಕೊಳ್ಳುವುದು ಒಂದು ಗುಣವಾಗಿದೆ. ಅವರು ಹೆಣ್ಣು-ಮಣ್ಣು-ಹೊನ್ನು ಈ ಮೂರನ್ನು ತಮ್ಮ ಗೌರವದ ಸಂಕೇತವಾಗಿ ಬಳಸತ್ತಾರೆ. ಮನುಷ್ಯ ನಾಗರೀಕನಾಗುತ್ತಿದ್ದರೂ ಅವನ ಕೌರ್ಯ ಮಾತ್ರ ಕಡಿಮೆಯಾಗುವುದಿಲ್ಲ ಕಾದಂಬರಿಯಲ್ಲಿ. ಕಾಮ, ದ್ವೇಷ-ಕ್ರೌರ್ಯ ಇವು ಇನ್ನೂ ಹಳ್ಳಿಗಳಲ್ಲಿ ಜೀವಂತವಾಗಿ ಕಂಡುಬರುತ್ತವೆ. ಹೊಸೂರಿನ ಶಿವಗಂಗನ ಜೊತೆ ದ್ವೇಷವನ್ನು ಕಟ್ಟಿಕೊಳ್ಳುತ್ತಾನೆ. ಅದಕ್ಕಾಗಿ ಕೊನೆಗೆ ಕಮಲಮ್ಮನ ಅತ್ಯಾಚಾರ ನಡೆಯುತ್ತದೆ. ಇದರಿಂದ ರೋಷಗೊಂಡ ಚಂದ್ರೇಗೌಡ ಇಡೀ ಕಾದಂಬರಿಯಲ್ಲಿ ಒಂದು ದಿನವೂ ತನ್ನ ಹೆಂಡತಿ ಹೆಸರನ್ನು ಕರೆಯದವನು ಅಂದು ಅವಳನ್ನು ಕಂಡು 'ಕಮಲೀ' ಎಂದು ಕೂಗಿಕೊಳ್ಳುತ್ತಾನೆ. ಈ ಘಟನೆ ತನ್ನ ಗೌರವಕ್ಕೆ ಧಕ್ಕೆಯುಂಟಾದಂತೆ ಎಂದು ಭಾವಿಸಿ ಹೊಸೂರಿನ ಶಿವಗಂಗ ಮತ್ತು ಸ್ನೇಹಿತರನ್ನು ಪ್ರಾಣಿಗಳಂತೆ ಕತ್ತರಿಸುತ್ತಾನೆ. ಮತ್ತು ತನ್ನ ಪ್ರತಿಷ್ಠೆಗೆ ತಗುಲಿದ್ದ ಅವಮಾನದ ಪ್ರತೀಕಾರ ತೀರಿಸಿಕೊಳ್ಳುತ್ತಾನೆ. ತನ್ನ ಆಸ್ತಿ, ತನ್ನಗೌರವ, ತನ್ನ ಮನೆತನ, ತನ್ನ ಹೆಣ್ಣುಗಳು ಇವೆಲ್ಲವೂ ತನ್ನ ಪ್ರತಿಷ್ಠೆಯ ಸಂಕೇತಗಳಂತೆ ಬಳಸಿದ್ದು ಇವುಗಳಲ್ಲಿ ಯಾವುದಕ್ಕೆ ಚ್ಯುತಿಬಂದರೂ ಅದರ ವಿರುದ್ಧದ ಕೌರ್ಯ ಕಾದಂಬರಿಯಲ್ಲಿ ಕಂಡುಬರುತ್ತದೆ.

ಸೀಮಂತ ಕಥೆಯಲ್ಲಿ ಬರುವ ಪದ್ಮಳದು ಇದಕ್ಕಿಂತ ಭಿನ್ನವಾದದ್ದು. ತನ್ನ ಗಂಡ ದೈಹಿಕ ಸುಖವನ್ನು ನೀಡಲಾರದ ಅಸಮರ್ಥನಾಗಿರುತ್ತಾನೆ. ತನ್ನ ದೌರ್ಬಲ್ಯ ಗೊತ್ತಿದ್ದಾಗ್ಯೂ ತಾಯಿ ಸೊಸೆ ಬಂಜೆ ಇವಳಿಗೆ ಮಕ್ಕಳಾಗುವುದಿಲ್ಲ ಎಂದು ಹೇಳಿಕೊಂಡಾಗಲೂ ತನ್ನ ದೌರ್ಬಲ್ಯವನ್ನು ತಾಯಿಗೂ ಹೇಳದ ಸ್ವಾರ್ಥ ಸ್ವಭಾವದವನಾಗಿದ್ದಾನೆ. ಕೆಲವು ಮನುಷ್ಯನ ದೌರ್ಬಲ್ಯಗಳು ಮನುಷ್ಯನನ್ನು ಮಾನಸಿಕವಾಗಿ ಹಿಂಸಿಸುತ್ತವೆಯಾದರೂ ಇವನು ಎಲ್ಲಿಯೂ ಇದನ್ನು ಹಿಂಸೆಯೆಂದು ಕೊಂಡು ಪರಿತಪಿಸುವುದಿಲ್ಲ. ಹೆಂಡತಿಯೊಂದಿಗೆ ಸದಾ ನಗುತ್ತಲೇ ಪ್ರೀತಿಯಿಂದ ಮಾತನಾಡುತ್ತಾನೆ. ತನ್ನ ತಾಯಿಯನ್ನು ಅಷ್ಟೇ ಇಷ್ಟಪಡುತ್ತಾನೆ.

ಇಲ್ಲಿಯೂ ಪದ್ಮಳಿಗೆ ಮಕ್ಕಳಾಗಿಲ್ಲ ಎನ್ನುವ ಕೊರಗು ಇದ್ದರೂ ಮೌನವಾಗಿಯೇ ಇರುತ್ತಾಳೆ. ತನ್ನ ದೌರ್ಬಲ್ಯದಿಂದ ತನ್ನ ಹೆಂಡತಿ ಬೇರೆ ಸಂಬಂಧ ಹೊಂದಿದ್ದು ಗೊತ್ತಾದರೂ ಮೌನವಾಗುತ್ತಾನೆ. ಕಾರಣ ಹೆಂಡತಿ ಬಂಜೆ ಎನ್ನುವುದರಿಂದ ಮುಕ್ತನಾಗಬೇಕು. ತನ್ನ ಹೆಂಡತಿಯ ಅನೈತಿಕ ಸಂಬಂಧವನ್ನು ಕಂಡು ತಾಯಿ ಹೇಳಿದಾಗಲೂ ತನ್ನ ಹೆಂಡತಿ ಪದ್ಮ ನೊಂದುಕೊಳ್ಳಬಾರದೆಂದು ಸಂತೈಸುತ್ತಾನೆ. ಪದ್ಮ ತಾನು ಬಸಿರಾದಾಗ ಪಾಪಪ್ರಜ್ಞೆ ಕಾಡಿ ಇಡೀ ಕಾದಂಬರಿಯಲ್ಲಿ ಮೌನವಾಗಿರುತ್ತಾಳೆ. ನವ್ಯ ಲೇಖಕರಾದ ಆಲನಹಳ್ಳಿಯವರು ಹೆಣ್ಣನ್ನು ಬಂಜೆಯಾಗಿಸಿ ವಂಶದ ಕುಡಿ, ವಂಶೋದ್ಧಾರಕ ಎಂಬ ಪದಗಳನ್ನು ಹೊಡೆದುಹಾಕುತ್ತಾರೆ. ಸಾಂಪ್ರದಾಯಿಕವಾಗಿ ವಂಶದ ಕುಡಿ ಗಂಡನ ರಕ್ತಕ್ಕೆ ಸಂಬಂಧಿಸಿದ್ದಾಗಿರಬೇಕು ಆದರೆ ಗಂಡನನ್ನು ಶಂಡನಂತೆ ಚಿತ್ರಿಸಿ ಇವಳ ಬಸಿರಿಗೆ ಅಪವಿತ್ರತೆ ಕಾಡುವಂತೆ ಮಾಡಿದ್ದಾರೆ. ಈ ಕತೆಯಲ್ಲಿ ಹೆಣ್ತನ, ಪಾವಿತ್ರ್ಯತೆ ಮುಂತಾದ ಅಂಶಗಳಿಗೆ ಲೇಖಕರು ಎಂದೂ ಬೆಲೆಕೊಡುವುದಿಲ್ಲ.

ಸುಟ್ಟ ತಿಕದ ದೇವರು ಕತೆಯಲ್ಲಿ ಬರುವ ದೊಡ್ಡವರು ತನ್ನ ಮಗ ಮಾದಪ್ಪನಿಗೆ ಮದುವೆ ಮಾಡುತ್ತಾನೆ. ಇವನ ಹೆಂಡತಿಯಾಗಿ ಬಂದವರು ಚಿನ್ನಮ್ಮ, ಗಂಡಹೆಂಡತಿ ಅನ್ಯೋನ್ಯವಾಗಿಯೇ ಇದ್ದರು. ಆದರೂ ಚಿನ್ನಮ್ಮಳಿಗೆ ಮಾದಪ್ಪನಿಂದ ಸಾಕಷ್ಟು ದೈಹಿಕ ಸುಖ ಸಿಕ್ಕುತ್ತಿರಲಿಲ್ಲ. ಕಾರಣ ಇವನು ಯಾವಾಗಲೂ ಒಂದೂರಿನಿಂದ ಇನ್ನೊಂದೂರಿಗೆ ಸುತ್ತುವುದು ಯಾವಾಗಲೆಂದರೆ ಆವಾಗ ಮನೆಯಿಂದ ಹೊರಟುಹೋಗುವುದು, ಯಾವಾಗಲೋ ಬರುವುದು ಇದ್ದರೆ ಇದ್ದ, ಎದ್ದರೆ ಎದ್ದ ಹಾಗಿದ್ದನು. ಚಿನ್ನಮ್ಮ ಇವನಿಂದ ಎಂದೂ ಲೈಂಗಿಕ ತೃಪ್ತಿ ಪಡೆಯದವಳಾಗಿದ್ದಾಳೆ. ಮನುಷ್ಯ ಸಹಜವಾದ ತೃಷೆ ಇವಳನ್ನು ಬಾದಿಸುತ್ತದೆ. ಇಂತಹ ಗಂಡನನ್ನು ಕಟ್ಟಿಕೊಂಡದ್ದಕ್ಕೆ ಯಾವ ಸುಖವನ್ನು ಕಾಣದ ಹೆಣ್ಣಾಗಿ ಕಂಡುಬರುತ್ತಾಳೆ. ಲೈಂಗಿಕ ತೃಷೆ ಎಂತಹ ಕೇಡಿನ ಕೆಲಸವನ್ನಾದರೂ ಮಾಡಿಸುತ್ತದೆ ಎಂಬುದಕ್ಕೆ ಚಿನ್ನಮ್ಮ ಮತ್ತು ದೊಡ್ಡವರ ಅನೈತಿಕ ಸಂಬಂಧವೇ ಎದ್ದು ಕಾಣುತ್ತದೆ. ಹಿರಿಯರಾದ ದೊಡ್ಡವರು ಊರಿನಲ್ಲಿ ಮರ್ಯಾದೆಯಿಂದ ಬದುಕಿದವರು ತಮ್ಮ ಎರಡನೆ ಹೆಂಡತಿ ಸತ್ತಿದ್ದರೂ ಯಾವುದೇ ಅನೈತಿಕ ಸಂಬಂಧ ಹೊಂದಿರದ ಮನುಷ್ಯ, ಊರಲ್ಲಿ ಇವರಿಗೆ ಒಳ್ಳೆಯ ಅಭಿಪ್ರಾಯವಿರುತ್ತದೆ. ತಬ್ಬಲಿ ಮಗನನ್ನು ಹೆಬ್ಬುಲಿಯಂತೆ ಬೆಳೆಸಿರುತ್ತಾರೆ. ಇವನೇ ತಂದೆ-ತಾಯಿ ಎರಡೂ ಆಗಿರುತ್ತಾನೆ. ಆದ್ದರಿಂದ ಇವನನ್ನು ಊರಿನ ಜನಗಳು ಗೌರವಿಸುತ್ತಾರೆ. ಮನುಷ್ಯನ ಒಂಟಿತನ ಮತ್ತು ಜೀವನದಲ್ಲಿ ಸಿಗಲಾರದ ಲೈಂಗಿಕ ಸುಖ ಮತ್ತು ಇನ್ನೂ ಬತ್ತದ ಯೌವನ ತನ್ನ ಮಗನ ದೌರ್ಬಲ್ಯಗಳು, ಸೊಸೆಯ ಸೌಂದರ್ಯ ಮತ್ತು ಸ್ತಿಮಿತಕ್ಕೆ ಬಾರದ ಮನಸ್ಸು ಇವನನ್ನು ಚಿನ್ನಮ್ಮಳೊಂದಿಗೆ ಅನೈತಿಕ ಸಂಬಂಧಕ್ಕೆ ಎಡೆಮಾಡಿಕೊಡುತ್ತದೆ. ಚಿನ್ನಮ್ಮಳ ತಾಟಗಿತ್ತಿತನ ಇಲ್ಲಿ ಚಿತ್ರಿತಗೊಂಡಿದೆ. ಲೇಖಕರು ಇಲ್ಲಿನ ಸಂಬಂಧವನ್ನು ಹೊಡೆದುಹಾಕುತ್ತಾರೆ. ಮತ್ತು ಇವರ ನಡುವಿನ ಅನೈತಿಕ ಸಂಬಂಧ ಸಾಂಪ್ರದಾಯಿಕವಾಗಿ ಸಾಗಿಸಿಕೊಂಡು ಬಂದ ಕೆಲವು ನೈತಿಕ ಸಂಬಂಧಗಳ ಲೈಂಗಿಕ ನಿಷೇಧವನ್ನು ಉಲ್ಲಂಘಿಸುತ್ತಾರೆ. ಇಲ್ಲಿ ಬರುವ ದೊಡ್ಡವರನ್ನು ಅಸ್ತಿತ್ವವಾದಿಯಂತೆ ಚಿತ್ರಿಸಿದ್ದಾರೆ. ಆದ್ದರಿಂದಲೇ ಸೊಸೆಯ ಅರೆಬೆತ್ತಲೆ ದೇಹವನ್ನು ಕಂಡಾಗ ವಿಚಲಿತನಾಗುತ್ತಾನೆ. ಮತ್ತು ಸಮಯ ಸಿಕ್ಕಾಗ ಆಕೆಯೊಂದಿಗೆ ಕೂಡುತ್ತಾನೆ. ಇವರಿಗೆ ಯಾವುದೇ ಅಪಮಾನದ ಭಯವಿಲ್ಲ.

ಕಮಲಮ್ಮಳಿಗೂ ಚಿನ್ನಮ್ಮಳಿಗೂ ಆಗಾಧವಾದ ವ್ಯತ್ಯಾಸವಿದೆ. ತನ್ನ ಗಂಡನಿಂದ ಎಂದೂ ಸುಖಕಾಣದ ಕಮಲಮ್ಮ ಅನೈತಿಕತೆಯನ್ನೊಲ್ಲದ ಗರತಿಯಾಗುತ್ತಾಳೆ. ಮತ್ತು ಊಳಿಗಮಾನ್ಯ ಪದ್ಧತಿಯಲ್ಲಿರುವ ಶೋಷಣೆಗೆ ಒಳಗಾಗುತ್ತಾಳೆ. ಚಿನ್ನಮ್ಮ ಜೀವನವೆಂದರೇ ಕೇವಲ ಭೋಗವಷ್ಟೇ ಎಂದು ತಿಳಿಯುತ್ತಾಳೆ. ತನ್ನ ಮನೆತನ, ತನ್ನ ಗಂಡ, ಮನೆಯ ಮರ್ಯಾದೆಯ ಬಗ್ಗೆ ಯೋಚಿಸುವುದೇ ಇಲ್ಲ. ಕಾರಣ ಇವುಗಳೆಲ್ಲವೂ ಒಂದು ಹೆಣ್ಣಿನ ಶೋಷಣೆಯನ್ನೇ ಬಯಸುತ್ತವೆ. ಈ ಹೆಣ್ಣು ಇವುಗಳನ್ನು ಲೆಕ್ಕಿಸದೇ ಅಸ್ತಿತ್ವದ ಬುನಾದಿಯನ್ನೇ ಅಲ್ಲಾಡಿಸುವಂತೆ ನಿಷೇಧಿತ ಲೈಂಗಿಕ ಸಂಬಂಧವನ್ನು ಮುಂದುವರಿಸುತ್ತಾಳೆ. ಇಲ್ಲಿಯೂ ಊಳಿಗಮಾನ್ಯ ಪದ್ಧತಿ ಕಂಡುಬರುವುದರ ಜೊತೆಗೆ ಕ್ರೌರ್ಯವಿದೆ. ಇಲ್ಲಿ ದೊಡ್ಡವರು ಸಂಸಾರದ ಹೊಣೆಹೊತ್ತವರು. ತನ್ನ ಮಗನ ಪ್ರಗತಿಯನ್ನು

ಬಯಸುವಂತೆ ಇವನಿಗಾಗಿ ಭೂಮಿಯನ್ನು ಸಂಪಾದಿಸಿ ಮಾದಪ್ಪನ ಮದುವೆಯನ್ನೂ ಮಾಡಿರುತ್ತಾನೆ. ಆದರೂ ಇವನೊಬ್ಬ ನೀಚ ಮತ್ತು ದುಷ್ಟ. ಇವನಲ್ಲಿ ಮಗನ ಪ್ರೀತಿಗಿಂತ ತನ್ನ ಆಸೆ-ಅಭಿಲಾಷೆಗಳೇ ಹೆಚ್ಚಾಗಿ ಕೊನೆಗೆ ನೊಂದು ನೊಂದು ಸಾಯುವ ಮನುಷ್ಯನ ದೌರ್ಬಲ್ಯದ ಚಿತ್ರಣವಿದೆ.

ಗಂಡ ಹೆಂಡತಿಯ ಸಂಬಂಧ ಪವಿತ್ರವಾದದ್ದು ಎಂಬ ಪ್ರಜ್ಞೆಯನ್ನು ಸ್ಥಾಪಿಸಿಕೊಂಡು ಬಂದಿರುವ ಸಮಾಜದಲ್ಲಿ ಇವುಗಳು ಒಂದು ನೈತಿಕ ಚೌಕಟ್ಟಿನಲ್ಲಿ ಮಾತ್ರವೇ ಸಾಗಿದಾಗ ಅದು ಒಂದು ಪವಿತ್ರ ಸಂಬಂಧವಾಗುತ್ತದೆ. ಇಲ್ಲಿ ನಡೆಯುವ ಪ್ರತಿಯೊಂದು ಸಂಘರ್ಷವೂ ಭಿನ್ನವಾಗಿದ್ದು ಅವುಗಳ ಅಂತ್ಯವು ಹಿಂಸೆಯಿಂದ, ರಕ್ತಪಾತದಿಂದ ಕೊನೆಗೊಳ್ಳುತ್ತದೆ. ಸೀಮಂತ ಕತೆಯಲ್ಲಿ ಗಂಡನೇ ಸ್ವಯಂ ಸಹಾಯ ಸಹಕಾರ ನೀಡುವಂತೆ ಕಂಡು ಬಂದು ತನ್ನ ಹೆಂಡತಿಯ ಬಗ್ಗೆ ಅಗಾಧವಾದ ಪ್ರೀತಿಯನ್ನು ಹೊಂದಿರುತ್ತಾನೆ. ಇವನು ಚಂದ್ರೇಗೌಡ ಅಥವಾ ಮಾದಪ್ಪನ ಹಾಗೆ ತನ್ನ ಹೆಂಡತಿಯ ಬಗ್ಗೆ ನಿರಾಸಕ್ತಿ ಹೊಂದಿರುವುದಿಲ್ಲ. ಇದಕ್ಕೆಲ್ಲ ಅವರ ಮಾನಸಿಕ ಒತ್ತಡ, ಮತ್ತು ಅವರ ಪರಿಸರಗಳೇ ಕಾರಣವಾಗುತ್ತವೆ. ಪ್ರತಿಷ್ಠೆ ಗೌರವವೆಂದು ತಿಳಿಯುವ ಚಂದ್ರೇಗೌಡ ತನ್ನ ಹೆಂಡತಿಯ ಮೇಲೆ ಅತ್ಯಾಚಾರ ಮಾಡಿದವರನ್ನು ಪ್ರಾಣಿಗಳಂತೆ ಬಲಿತೆಗೆದುಕೊಳ್ಳುತ್ತಾನೆ. ತನ್ನ ಜವಾಬ್ದಾರಿ ಮತ್ತು ಕರ್ತವ್ಯಗಳನ್ನೇ ತಿಳಿಯದ ಆಲಸಿ ಜೀವನ ಸಾಗಿಸುವ ಮಾದಪ್ಪ ತನ್ನ ಹೆಂಡತಿ ಮುಂದೆ ಈ ರೀತಿ ನಡೆದುಕೊಳ್ಳುವುದಿಲ್ಲ ಎಂದು ಹೇಳಿದರೂ ಅವಮಾನವಾದಂತೆ ತಿಳಿದು ಹೆಂಡತಿಯನ್ನು ಸಾಯಿಸುತ್ತಾನೆ. ಇದೊಂದೇ ಇವನ ದೌರ್ಬಲ್ಯವಾಗಿ ಕಾಡುತ್ತದೆ. ಆದರೇ ನರಹರಿ ಇದು ಕೇವಲ ಮನುಷ್ಯ ಸಹಜ ಕ್ರಿಯೆ ಎಂದು ತಿಳಿಯುತ್ತಾನೆ. ತನ್ನ ಹೆಂಡತಿಯ ಬಸಿರಿಗೆ ಕಾರಣನಾದ ಶ್ರೀಧರನನ್ನೂ ಸೀಮಂತ ದಿನ ಮನೆಗೆ ಕರೆತಂದಿರುತ್ತಾನೆ. ನವ್ಯ ಬರಹಗಾರರ ಸಮಕಾಲೀನವಾಗಿ ಯೋಚಿಸುವ ಇವನು ಅನೈತಿಕ ಲೈಂಗಿಕತೆ, ಸಂಪ್ರದಾಯಗಳಿಗೆ ಅಷ್ಟೊಂದು ಗಾಢವಾಗಿ ಪ್ರತಿಕ್ರಿಯಿಸುವುದಿಲ್ಲ. ಇದಕ್ಕೆ ಇವನ ದೌರ್ಬಲ್ಯವೂ ಕಾರಣವಾಗಿದೆ.

ತಪ್ಪು ತಿಳುವಳಿಕೆ ಮತ್ತು ಅತಿಯಾದ ಲೈಂಗಿಕ ವ್ಯಾಮೋಹ 'ಪರಸಂಗದ ಗೆಂಡೆತಿಮ್ಮ' ಕಾದಂಬರಿಯಲ್ಲಿ ಕಂಡುಬರುತ್ತದೆ. ಮರಂಕಿ ಮದುವೆಗೆ ಮೊದಲಿನಿಂದಲೂ ಅನೈತಿಕ ಸಂಬಂಧ ಹೊಂದಿದ್ದವಳಾಗಿದ್ದಾಳೆ. ಮದುವೆಯಾದ ಮೇಲೂ ಇದನ್ನೇ ಮುಂದುವರೆಸುತ್ತಾಳೆ. ತನ್ನ ಹೆಂಡತಿಯನ್ನು ಹೆಚ್ಚಾಗಿ ಪ್ರೀತಿಸುವ ಗೆಂಡೆತಿಮ್ಮ ತನ್ನ ಹೆಂಡತಿಗೆ ಏನೂ ತೊಂದರೆಯಾಗಬಾರದೆಂದು ಕೇಳಿದ್ದನ್ನೆಲ್ಲಾ ಆಕೆ ಬಯಸಿದ್ದನ್ನೆಲ್ಲಾ ತಂದುಕೊಡುವ ದಾಸನಾಗಿ ಬಿಡುತ್ತಾನೆ. ಅವಳ ಮಾತಿಗೆ ಮರುಳಾಗಿ ಮನೆಯನ್ನೂ ಪಾಲುಮಾಡಿಸುತ್ತಾನೆ. ಇದನ್ನೇ ಗಂಡನ ದೌರ್ಬಲ್ಯ ಎಂದು ತಿಳಿಯುತ್ತಾಳೆ. ಗೆಂಡೆತಿಮ್ಮ ಸ್ವಲ್ಪ ವಯಸ್ಸಾದವನಾಗಿದ್ದು ಲೈಂಗಿಕತೆಯ ಬಗ್ಗೆ ಹೆಚ್ಚಿನ ತಿಳುವಳಿಕೆ ಇರುವುದಿಲ್ಲ. ಲೇಖಕರು ಒಂದು ವೈವಾಹಿಕ ಸಂಬಂಧಕ್ಕೆ ಸರಿಯಾದ ಗಂಡುಹೆಣ್ಣಿನ ವಯಸ್ಸು ಎಷ್ಟು ಮುಖ್ಯ ಮತ್ತು ಲೈಂಗಿಕ ಶಿಕ್ಷಣದ ಅವಶ್ಯಕತೆಯನ್ನು ಸೂಚಿಸುತ್ತಾರೆ. ಆಲನಹಳ್ಳಿಯವರು ಪುರುಷನಿಗೆ ಒಂದು ದೌರ್ಬಲ್ಯವನ್ನು ಉಂಟುಮಾಡಿ ಅವನ ಹೆಂಡತಿಯನ್ನು ಅತಿಯಾದ ಲೈಂಗಿಕ ಬಯಕೆಯುಳ್ಳ ಹೆಣ್ಣಾಗಿ ಚಿತ್ರಿಸಿದ್ದಾರೆ. ಇದೆ ಹಲವು ಕತೆಗಳಲ್ಲಿ ದುರಂತವನ್ನು ಚಿತ್ರಿಸುತ್ತದೆ. ತಮ್ಮ ಯಾವ ಕತೆ-ಕಾದಂಬರಿಯಲ್ಲಿಯೂ ಪ್ರೀತಿ, ಪ್ರೇಮ, ಸುಖಿ ಜೀವನವನ್ನು ಚಿತ್ರಿಸುವುದಿಲ್ಲ. ಮನುಷ್ಯನಲ್ಲಿ ಉಂಟಾಗುವ ಅಸಹಾಯಕತೆ, ಕ್ರೌರ್ಯ, ಅಸ್ಥಿರತೆ, ದೌರ್ಬಲ್ಯ ಮುಂತಾದವುಗಳೇ ಹೆಚ್ಚಾಗಿ ಕಂಡುಬರುತ್ತವೆ. ಇವುಗಳಿಂದಲೇ ಲೇಖಕರು ತಮ್ಮ ನವ್ಯ ಪ್ರಜ್ಞೆಯನ್ನು ಸೂಚಿಸುತ್ತಾರೆ. ಮರಂಕಿಯ ತಂದೆ ಮತ್ತು ತಾಯಿ ಇಬ್ಬರೂ ಅನೈತಿಕ ಸಂಬಂಧ ಹೊಂದಿದ್ದರಿಂದ ಅವರಲ್ಲೂ ಪ್ರಶ್ನಿಸುವ ಬಗ್ಗೆ ಅಳುಕಿತ್ತು. ಆದ್ದರಿಂದ ಅವರೂ ಅವಳನ್ನು ಅಷ್ಟಾಗಿ ಪ್ರಶ್ನಿಸದಂತಾಗುತ್ತಾರೆ. ಇದರಿಂದ ಮರಂಕಿ ಮಹದೇವನಾಯ್ಕ ಮತ್ತು ಮೇಷ್ಟ್ರು ಶಿವಣ್ಣನ ಜೊತೆ ಸಂಬಂಧ ಬೆಳೆಸುತ್ತಾಳೆ. ಇದು ಕೊನೆಗೆ ದುರಂತವಾಗುತ್ತದೆ. ಇಲ್ಲಿ ತಂದೆ ತಾಯಿಗಳ ದೌರ್ಬಲ್ಯಗಳು ಕಂಡುಬರುತ್ತವೆ. ಮರಂಕಿ ತನ್ನ ಅನೈತಿಕ ಸಂಬಂಧ ಗಂಡನಿಗೆ ತಿಳಿದಾಗ ಇವಳಿಗೆ ಒಳಗೇ ತನ್ನ ತಿಳಿಗೇಡಿತನದ ಅರಿವಾಗಿ ಮರಂಕಿ ಸಾವನ್ನನುಭವಿಸುತ್ತಾಳೆ.

ಈ ದುರಂತಕ್ಕೆ ಗೆಂಡೆತಿಮ್ಮನಾಗಲೀ ಅಥವಾ ಅವನ ಕುಟುಂಬವಾಗಲೀ ಕಾರಣವಾಗದೇ ಶಿವಣ್ಣನಂತಹ ಆಧುನಿಕ ನಾಗರೀಕ ವ್ಯಕ್ತಿಯೊಂದಿಗೆ ಸಂಬಂಧ ಹೊಂದುವುದು ಪ್ರತಿಷ್ಠೆಯ ವಿಷಯವೆಂದೇ ತಿಳಿದಿದ್ದು.

ತನ್ನ ಸೌಂದರ್ಯ ಬಳಕೆಯ ವಸ್ತುಗಳಿಂದ ಮೆರೆದ ಮರಂಕಿ ದರ್ಪ ಮತ್ತು ವೈಯ್ಯಾರದಿಂದ ಬಾಳುತ್ತಾಳೆ. ಇವಳಿಗೆ ವಿವಾಹಬಾಹಿರ ಸಂಬಂಧಗಳು ಮತ್ತು ವಿಲಾಸಿ ಜೀವನ ಇವಳ ಸಾವಿಗೆ ಕಾರಣವಾಗುವುದನ್ನೂ ಚಿತ್ರಿಸುತ್ತಾರೆ. ಕಾದಂಬರಿಯು ಮೊದಲು ಮನುಷ್ಯರ ಮನಸ್ಸುಗಳು ತಟಸ್ಥವಾಗಿದ್ದು ಕೊನೆಗೆ ಗದ್ದಲ ಉಂಟಾಗುತ್ತದೆ. ಸಮಾಜ ತನ್ನ ಹಳೆಯ ಬದುಕನ್ನು ಕಳಚಿ ಹೊಸ ಬದುಕಿಗೆ ಹಾತೊರೆಯುತ್ತದೆ. ಆದರೆ ಆದರ್ಶ ಬದುಕನ್ನು ಬಯಸುತ್ತಿದ್ದ ಗೆಂಡೆತಿಮ್ಮ ಬಿರುಗಾಳಿಗೆ ಸಿಕ್ಕ ತರಗೆಲೆಯಂತಾಗುತ್ತಾನೆ. ಲೇಖಕರು ನವ್ಯ ಬರಹಗಾರರಾದ್ದರಿಂದ ಈ ಕಾದಂಬರಿಯಲ್ಲಿ ಪ್ರೀತಿ, ವಿಶ್ವಾಸ, ರಕ್ತಸಂಬಂಧದ ಅವಶ್ಯಕತೆಗಳು ಬಹಳ ಕಡಿಮೆಯಾಗಿವೆ. ಇವರು ಜೀವನದ ಸಂಕೀರ್ಣತೆಯನ್ನು ಆಧುನಿಕ ಬದುಕಿನ ದುರಂತ ಛಾಯೆಯನ್ನು ಚಿತ್ರಿಸಿದ್ದಾರೆ.

ಮನುಷ್ಯನ ಇತರ ಸಂಬಂಧಗಳಲ್ಲು ಕೆಲವೊಮ್ಮೆ ಇಂತಹ ಲೈಂಗಿಕ ಸಂಘರ್ಷ ಉಂಟಾಗುತ್ತವೆ. ಆದರೆ ಇಲ್ಲಿ ಲೈಂಗಿಕತೆಯನ್ನು ಮರಂಕಿಯ ಹಾಗೆ ತಪ್ಪು ತಿಳುವಳಿಕೆಯ ಅರ್ಥದಲ್ಲಿ ಬಳಸದೇ ಅದನ್ನು ಒಂದು ಸ್ವಾತಂತ್ರ್ಯದ ವಿಷಯವನ್ನಾಗಿ ಚಿತ್ರಿಸುತ್ತಾರೆ. ಆಲನಹಳ್ಳಿ ಸಾಹಿತ್ಯದಲ್ಲಿ ಲೈಂಗಿಕತೆಯನ್ನು ನಿಗ್ರಹಿಸುವ ಪಾತ್ರವೇ ಇಲ್ಲ. ಬದಲಾಗಿ ಎಲ್ಲವೂ ಒಂದಲ್ಲಾ ಒಂದು ಕಾರಣಕ್ಕಾಗಿ ಅದುಮಿಟ್ಟುಕೊಂಡಿದ್ದನ್ನು ಬಿಚ್ಚಿಡುವಂತೆ ಚಿತ್ರಿಸಿದ್ದಾರೆ. ಇದೇ ಇವರ ಸಾಹಿತ್ಯದ ಒಂದು ವಿಶೇಷವೂ ಹೌದು. ಇವರಿಗೆ ಜೀವನದ ನಿರ್ದಿಷ್ಟವಾದ ಯಾವುದೇ ನಿಶ್ಚಿತವಾದ ಗುರಿಗಳಿಲ್ಲ. ಬದಲಾಗಿ ಬದುಕನ್ನು ಬಂದಂತೆ ಅನುಭವಿಸುವುದಾಗಿದೆ.

'ಗೀಜನಗನ ಗೂಡು' ಕಥೆಯಲ್ಲಿ ಬರುವ ರಷ್ಯಾದ ಹೆಣ್ಣು ತನ್ನ ದೇಶದ ಲೈಂಗಿಕ ಸ್ವಾತಂತ್ರ್ಯವನ್ನು ಇಲ್ಲಿ ಹೇಳಿಕೊಳ್ಳುತ್ತಾಳೆ. ಪಾಶ್ಚಾತ್ಯರ ಈ ಸ್ವಾತಂತ್ರ್ಯವು ಎಷ್ಟರಮಟ್ಟಿಗೆ ಎಂದರೇ ನಿರೂಪಕನೊಂದಿಗೆ ಕೂಡಿದ ಸನ್ನಿವೇಶವನ್ನು ತನ್ನ ಗಂಡನೊಂದಿಗೆ ಹೇಳಿಕೊಳ್ಳುವಷ್ಟು. ಇವರು ಎಷ್ಟು ಗಂಡಂದಿರೊಂದಿಗೆ ಬೇಕಾದರೂ ಸಂಬಂಧ ಹೊಂದುವ ಅವಕಾಶಗಳು ಕತೆಯಲ್ಲಿ ಕಂಡುಬರುತ್ತದೆ. ಇವಳ ಈ ಸ್ವಾತಂತ್ರ್ಯ ನಿರೂಪಕನಲ್ಲಿಯೂ ಕಂಡುಬರುತ್ತದೆ. ಇದು ಪಾವಿತ್ರ್ಯದ ಉಲ್ಲಂಘನೆ ಎಂದು ತಿಳಿಯುತ್ತದೆ. ಪಾಶ್ಚಾತ್ಯರ ಪ್ರಭಾದಿಂದಲೇ ಬಂದದ್ದರಿಂದ ಇದನ್ನು ಹೇಳುವ ಪ್ರಯತ್ನ ಮಾಡುತ್ತಾರೆ. ನವ್ಯದ ಈ ಧೋರಣೆಗಳು ಎಷ್ಟೊಂದು ಪ್ರಬಲವಾದವು ಎಂಬುದನ್ನು ಮೊದಲಿದ್ದ ಪೋವೆಲ್‌ನಂತಹ ಹಳೆಯ ಸಾಹಿತ್ಯಕ್ಕೆ ಬೆಲೆಕೊಡದೇ ಹೊಸ ನಿರೂಪಕನನ್ನು ಬಯಸುತ್ತಾಳೆ. ನಿರೂಪಕನು ವಾಸ್ತವವಾದಿಯಾಗಿ ತನ್ನ ಅನುಭವಗಳಿಗೆ ದಕ್ಕುವ ಎಲ್ಲವನ್ನೂ ಬಳಸಿಕೊಂಡು ಅರಗಿಸಿಕೊಳ್ಳುತ್ತಾನೆ. ಸ್ತ್ರೀಯು ಲೈಂಗಿಕ ಪಾವಿತ್ರತೆಯ ವಿಷಯ ಇನ್ನೆಂದೂ ಕಾಡುವುದಿಲ್ಲ ಎನ್ನುವಂತೆ ಮತ್ತೆ ಬೆಂಗಳೂರಿಗೆ ಬಂದಾಗ ತನ್ನನ್ನು ಭೇಟಿಯಾಗಬೇಕೆಂದು ನಿರೂಪಕನಿಗೆ ತಿಳಿಸುತ್ತಾಳೆ. ಇಲ್ಲಿನ ಎರಡು ಪುರುಷ ಪಾತ್ರಗಳಲ್ಲಿ ಪೋವೆಲ್ ಅತ್ಯಂತ ದುರ್ಬಲ ವ್ಯಕ್ತಿಯಾಗಿದ್ದಾನೆ. ಆದ್ದರಿಂದಲೇ ಮೈಸೂರಿಗೆ ವಾಪಸ್ಸು ಹೋಗುತ್ತೇನೆ ಎಂದು ಹೋದವನು ಮತ್ತೆ ವಾಪಸ್ಸು ಬರುತ್ತಾನೆ. ನಿರೂಪಕನೊಂದಿಗೆ ಅವಳು ಎಷ್ಟೇ ಸಲಿಗೆಯಿಂದ ಇದ್ದರೂ ಮೊದಲಿನಂತೆ ಸಿಟ್ಟಾಗದೇ ಎಲ್ಲವನ್ನೂ ನಗುವುದರೊಂದಿಗೇ ಸಹಿಸಿಕೊಳ್ಳುತ್ತಾನೆ. ಆದರೆ ಇವಳು ಮಾತ್ರ ಪೋವೆಲ್‌ನನ್ನು ಹಿಂಸಿಸುತ್ತಾಳೆ. ಪೋವೆಲ್ ಸಿಟ್ಟಾಗಿ ಬೆಂಗಳೂರಿಗೆ ಹೋಗುತ್ತೇನೆ ಎಂದಾಗ ಇವಳು ತುಂಬಾ ತಣ್ಣಗೆ ಥ್ಯಾಂಕ್ಸ್ ಪೋವೆಲ್ ನೀನು ಈಗ ಇಷ್ಟು ಅರ್ಜಂಟಾಗಿದ್ದರೆ ಹೋಗಿ. ನನ್ನ ಅಭ್ಯಂತರವಿಲ್ಲ, ನಾನು ಇಲ್ಲೆ ಇನ್ನೆರಡು ದಿನ ಇದ್ದು ಬರುತ್ತೇನೆ ಎಂದಳು. ಅಲ್ಲದೇ ಲೈಂಗಿಕ ಸುಖಕೊಡದ ಇವನನ್ನು ಶಂಡ ಎಂದು ಬೈದು ಅವಮಾನಪಡಿಸುತ್ತಾಳೆ. ಇವನು ಕತೆಯಲ್ಲಿ ಅತ್ಯಂತ ದುರ್ಬಲವಾದ ಮತ್ತು ದೌರ್ಬಲ್ಯಗಳನ್ನುಳ್ಳ ವ್ಯಕ್ತಿಯಾಗಿದ್ದಾನೆ. ಗೀಜಗನ ಗೂಡಿನ ಅರ್ಥದಂತೆ ಗೀಜಗದ ಹಕ್ಕಿಗಳಲ್ಲಿ ಹೆಣ್ಣು ಹಕ್ಕಿಯು ಗೂಡನ್ನು ಕಟ್ಟುವುದಿಲ್ಲ. ಆದರೆ ಗಂಡುಹಕ್ಕಿಯು ಸುಂದರವಾಗಿ ಗೂಡುಕಟ್ಟುತ್ತದೆ. ತಾನು ಮೊಟ್ಟೆ ಇಡುವ ಹರೆಯಕ್ಕೆ ಬಂದಾಗ ಯಾವ ಗಂಡು ಹಕ್ಕಿಯು ಸುಂದರವಾಗಿ ಗೂಡು ಕಟ್ಟುತ್ತಿರುತ್ತದೆಯೋ ಅದನ್ನು ಆಯ್ಕೆ ಮಾಡಿಕೊಂಡು ಆ ಗಂಡು ಹಕ್ಕಿಯೊಂದಿಗೆ

ಜೀವಿಸುತ್ತದೆ. ಇಲ್ಲಿ ರಷ್ಯಾದ ಹೆಣ್ಣು ಸಹ ಅಸಮರ್ಥವಾದ ಪೋವೆಲ್‌ನನ್ನು ತೊರೆದು ಸಮರ್ಥನಾದ ನಿರೂಪಕನನ್ನು ಆಯ್ಕೆಮಾಡಿಕೊಳ್ಳುತ್ತಾಳೆ.

'ಹುತ್ತ' ಕಥೆಯಲ್ಲಿ ಬರುವ ಸುಮಿತ್ರಳ ತಾಯಿಗೂ ಲೈಂಗಿಕ ಬಯಕೆಗಳು ಉಂಟಾಗಿ ತನ್ನ ಮಗಳ ಪ್ರಿಯಕರನಾದ ಮತ್ತು ತನ್ನ ಮಗಳ ವಯಸ್ಸಿನವನಾದ ನಿರೂಪಕನೊಂದಿಗೆ ಕೂಡಲು ಬಯಸುತ್ತಾಳೆ. ಮನುಷ್ಯನ ಲೈಂಗಿಕ ತೃಷೆಗೆ ಯಾವುದೇ ವಯಸ್ಸಿನ, ಸಂಬಂಧಗಳ ಪ್ರಶ್ನೆಯೇ ಕಾಣುವುದಿಲ್ಲ. ಇದು ಮನುಷ್ಯನನ್ನು ಎಂತಹ ಕೆಲಸಕ್ಕೆ ಬೇಕಾದರೂ ಪ್ರಚೋದಿಸುತ್ತದೆ. ಒಂಟಿಯಾದ ಹೆಣ್ಣು ನಗರ ಜೀವನಕ್ಕೆ ಆಸೆಪಟ್ಟು ತನ್ನ ಗಂಡನನ್ನು ಧಿಕ್ಕರಿಸಿ ಒಂಟಿಯಾಗಿ ಜೀವಿಸಲು ಇಷ್ಟಪಡುತ್ತಾಳೆ. ಇಲ್ಲಿ ಬೇರೆ ಯಾವ ಸಂಬಂಧಗಳೂ ಚರ್ಚಿತವಾಗುವುದಿಲ್ಲ. ಇವರಿಬ್ಬರ ಪಾತ್ರಗಳೇ ಕತೆಯನ್ನು ಆವರಿಸಕೊಂಡಿದೆ. ಹೆಣ್ಣುಗಳಲ್ಲಿನ ಮಿತಿಮೀರಿದ ಲೈಂಗಿಕ ಬಯಕೆಗಳನ್ನು ಲೇಖಕರು ಚಿತ್ರಿಸುತ್ತಾರೆ. ಗೀಜಗದಗೂಡು, ಇನ್ನೊಂದು ಪ್ರಣಯಪ್ರಸಂಗ, ಫಿನೀಕ್ಸ್, ಅಂಟಿಕೊಂಡ ನಂಟಿನ ಕೊನೆ ಬಲ್ಲವರಾರು ಇವೆಲ್ಲವೂ ಇದನ್ನೆ ಚಿತ್ರಿಸುತ್ತದೆ. ತನ್ನ ಕುಟುಂಬದ ಗಂಡನನ್ನು ಧಿಕ್ಕರಿಸಿ ಮಗಳೊಂದಿಗೆ ಇರುತ್ತಾಳೆ. ಇವಳು ಈ ಸ್ವತಂತ್ರ ಅಸ್ತಿತ್ವನ್ನು ಸಾಧಿಸುತ್ತಾಳೆಯಾದರೂ ಇವಳಲ್ಲಿ ಖಿನ್ನತೆ ಈ ಕತೆಯಲ್ಲಿದೆ. ಈ ಕತೆಯಲ್ಲಿ ಬರುವ ಪ್ರತಿಮೆಗಳಾದ ಹುತ್ತ-ಹಾವು ಇವುಗಳೆಲ್ಲವೂ ಅವಳ ಮನಸ್ಸು ಮತ್ತು ಕಾಮದ ಪ್ರತೀಕಗಳಾಗಿವೆ.

ಆಲನಹಳ್ಳಿ ಕೆಲವು ಕಥೆಗಳಲ್ಲಿ ವಯಸ್ಸಿನ ವಿಷಯ ಒಂದು ಸಮಸ್ಯೆಯೇ ಅಲ್ಲ. ಗಂಡು ಹೆಣ್ಣುಗಳು ಪರಸ್ಪರ ಒಪ್ಪಿಕೊಂಡರೆ ಅವರಿಬ್ಬರ ನಡುವಿನ ಸಂಬಂಧಕ್ಕೆ ಜಾತಿ ಮತ್ತು ವಯಸ್ಸು ಯಾವುದೂ ಅಡೆತಡೆ ಉಂಟುಮಾಡುವುದಿಲ್ಲ. 'ಇನ್ನೊಂದು ಪ್ರಣಯ ಪ್ರಸಂಗದ'ಲ್ಲಿಯೂ ಇದನ್ನೇ ಕಾಣುತ್ತೇವೆ. ಈ ಕತೆಯಲ್ಲಿ ಯಾರದ್ದು ತಪ್ಪು, ಈ ಅನೈತಿಕತೆಗೆ ಕಾರಣ? ಯಾರು ಎಂದು ತಿಳಿದುಕೊಳ್ಳಲು ಸಾಧ್ಯವಿಲ್ಲದಂತೆ ಕತೆಯನ್ನು ಎಣೆದಿದ್ದಾರೆ. ಇದೊಂದು ಆಕಸ್ಮಿಕ ಎಂಬಂತೆ ನಡೆದರೂ ಮತ್ತೆ ಮತ್ತೆ ಲೈಂಗಿಕ ಆಕರ್ಷಣೆಗಳು ಮರುಕಳಿಸುತ್ತವೆ. ಪಲ್ಲವಿ ಉಪನ್ಯಾಸಕಿಯಾಗಿ ಕೆಲಸ ಮಾಡುತ್ತಿದ್ದಾಗ ನಿರೂಪಕರು ಅದೇ ಕಾಲೇಜಿನ ವಿದ್ಯಾರ್ಥಿ. ಇವಳಿಗಿಂತಲೂ ವಯಸ್ಸಿನಲ್ಲಿ ಹಿರಿಯಳಾದ ಪಲ್ಲವಿಯೊಂದಿಗೆ ಇವನ ಸಂಬಂಧ ಬೆಳೆಯುತ್ತದೆ. ಇದು ಕೇವಲ ಗಂಡು ಹೆಣ್ಣಿನ ಲೈಂಗಿಕ ಸಂಬಂಧವನ್ನು ಹೇಳುವುದಲ್ಲದೇ ಎರಡು ಭಿನ್ನ ವಯಸ್ಸಿನ ವ್ಯಕ್ತಿಗಳ ಅನುಭವಗಳೂ ಹೌದು. ಆದ್ದರಿಂದಲೇ ನಿರೂಪಕ ತನ್ನ ಪ್ರಯಾಣದ ಸಮಯದಲ್ಲಿ ಹಳೆಯದನ್ನು ಮೆಲುಕು ಹಾಕುತ್ತಾನೆ. ಅವಳನ್ನು ನೋಡಲು-ಕೂಡಲು ಹಾತೊರೆಯುತ್ತಾನೆ. ವ್ಯಕ್ತಿಯ ಲೈಂಗಿಕ ಬಯಕೆಗಳು ಎಷ್ಟೊಂದು ಗಾಢವಾಗಿ ಪ್ರತಿಕ್ರಿಯಿಸುತ್ತಿವೆಯೆಂದರೆ ಪಲ್ಲವಿಯ ಪತ್ರಕಂಡೊಡನೆ ಹೊರಟು ಬಂದುಬಿಡುತ್ತಾನೆ. ಇವನ ಈ ಸ್ಥಿತಿಗೆ ಮನುಷ್ಯನ ಅಸ್ಥಿರತೆ, ಚಂಚಲತೆ ಇವುಗಳೆ ಆಗಿವೆ. ಮನುಷ್ಯನಿಗಂಟಿದ ಲೈಂಗಿಕ ಸಂಬಂಧಗಳು ಹೇಗೆ ಕಾಡುತ್ತವೆ ಎಂಬುದು ಎಂಟುವರ್ಷವಾದರೂ ಅವನ ನೆನಪುಗಳು ವಾಸ್ತವದಲ್ಲಿ ನಡೆಯುತ್ತಿರುವ ಘಟನೆಗಳಂತೆ ಕಾಣುತ್ತಾನೆ. ಪಲ್ಲವಿ ಸಂಪ್ರದಾಯಸ್ಥ ಕುಟುಂಬದವಳಾದರೂ ಯಾವುದೇ ಮುಜುಗರವಿಲ್ಲದೇ ತನ್ನ ಭಾವನೆಗಳನ್ನು ನಿರೂಪಕನೊಂದಿಗೆ ಹಂಚಿಕೊಳ್ಳುತ್ತಾಳೆ. ಇವಳು ಸ್ತ್ರೀಸಹಜವಾದ ಮದುವೆ, ಲೈಂಗಿಕ ಪಾವಿತ್ರತೆಗಳನ್ನು ದ್ವೇಷಿಸುವ ಹೆಣ್ಣಾಗಿದ್ದಾಳೆ. ಆದ್ದರಿಂದಲೇ ಮೈಚಳಿಬಿಟ್ಟು ಎಲ್ಲರಿಗೂ ಗೊತ್ತಾಗುವಂತೆ ಪ್ರೀತಿಸುತ್ತಾಳೆ. ಇವರ ವಿಷಯ ಕಕ್ಕಸಿನ ಗೋಡೆಗಳ ಮೇಲೆ ಸ್ಟಾಫ್ ರೂಮಿನ ಗೋಡೆಗಳ ಮೇಲೆ ರಾರಾಜಿಸಿದರೂ ಚಿಂತಿಸುವುದಿಲ್ಲ. ಮದುವೆಯಾಗಬೇಕೆಂದು ನಿರೂಪಕ ಕೇಳಿದಾಗ ಅದನ್ನು ನಿರಕಾರಿಸುತ್ತಾಳೆ. "ಬೇಡ ನನ್ನ ನಿನ್ನ ಸಂಬಂಧ ಮದುವೆಯಂಥ ಕಟ್ಟಿನೀದ ಮಲಿನವಾಗುವುದು ಬೇಡ"[೧] ಎಂದು ಬಿಡುತ್ತಾಳೆ. ವಯಸ್ಸಿನ ಅಂತರವಿಲ್ಲದ ಇವರಿಗೆ ಷೇಕ್ಸ್‌ಪಿಯರ್ ಆದರ್ಶವ್ಯಕ್ತಿ.

ಈ ಕತೆಳಲ್ಲಿ ಬರುವ ನಾಯಕ ಪಾತ್ರಗಳಲ್ಲಿ ಯಾವುದಕ್ಕೂ ಸರಿಯಾದ ಹೆಸರೆ ಕಂಡುಬರುವುದಿಲ್ಲ. ಇವೆಲ್ಲವೂ ಕಾಲಕ್ಕೆ ತಕ್ಕಂತೆ ಒಂದೇ ಪಾತ್ರದ ಬೆಳವಣಿಗೆಯಾಗಿ ಕಂಡುಬರುತ್ತವೆ. ಇಂತಹ ಒಂದು ಕಲೆಗಾರಿಕೆ ಆಲನಹಳ್ಳಿಯವರ ಹಲವು ಕಥೆಗಳಲ್ಲಿದೆ. ಈ ಕಥೆಗಳೆಲ್ಲವೂ ಓದುಗನನ್ನು ರಂಜನೀಯವಾಗಿ ಓದಿಸಿಕೊಳ್ಳುವುದರೊಂದಿಗೆ ನವ್ಯ ಪ್ರಜ್ಞೆಯನ್ನು ಸೂಚಿಸುತ್ತವೆ.

'ಫಿನೀಕ್ಸ್' ನವ್ಯ ಪ್ರಜ್ಞೆಯನ್ನೊಳಗೊಂಡ ಒಂದು ಕತೆಯಾಗಿದೆ. ಇಲ್ಲಿಯೂ ಗಂಡು ಹೆಣ್ಣಿನ ಲೈಂಗಿಕ ಆಕರ್ಷಣೆಗಳೇ ಹೆಚ್ಚು. "ನಿನಗೆ ಜಾಡಿಸಿ ಒದ್ದುಬಿಡಬೇಕೆನ್ನಿಸುತ್ತದೆ. ಕೋಪದಿಂದ ನಿನ್ನ ಮೈಮೂಳೆಗಳೆಲ್ಲ ಚೂರಾಗಿಬಿಡುವಂತೆ ಅಪ್ಪಿ ಹಿಸುಕಿ ಹಿಂಡಿಬಿಡಬೆಕು, ಇರುವ ನಿನ್ನ ನಗುವನ್ನೆಲ್ಲ ಕಕ್ಕಿಸಿಬಿಡಬೇಕೆಂದುಕೊಂಡು ಪಕ್ಕದ ಕೋಣೆಗೆ ಎಳೆದೊಯ್ಯುತ್ತಾನೆ."[೨] ಇಲ್ಲಿನ ನಾಯಕ ಪಾತ್ರ ಎರಡು ಹೆಣ್ಣುಗಳ ನಡುವಿನ ಸಂಬಂಧವನ್ನು ಹೊಂದಿದ್ದಾನೆ. ಮೇಲಿನ ಮಾತುಗಳು ಹೆಣ್ಣಿನ ಬಗ್ಗೆ ಇರುವ ಅವನ ಅಭಿಪ್ರಾಯವನ್ನು ಹೊರಹಾಕುತ್ತದೆ. ಇವನಿಗೆ ಸ್ತ್ರೀಯನ್ನು ಅವಳ ಇಡೀ ದೇಹವನ್ನು ಪಾವಿತ್ರತೆಯಿಂದ ಮುಕ್ತಗೊಳಿಸಿಬಿಡಬೇಕೆಂದುಕೊಳ್ಳುತ್ತಾನೆ. ಆದ್ದರಿಂದಲೇ ಹೆಣ್ಣು ಯಾವುದನ್ನು ತನ್ನ ಪಾವಿತ್ರ್ಯ ಎಂದು ತಿಳಿಯುತ್ತಾಳೋ ಅದನ್ನು ತನ್ನದಾಗಿಸಿಕೊಂಡು ಬಿಡುತ್ತಾನೆ. ಅಷ್ಟೇ ಅಲ್ಲದೇ ಆ ಹೆಣ್ಣನ್ನು ಮದುವೆಯಾಗಲು ಒಪ್ಪುವುದಿಲ್ಲ. ಬದಲಾಗಿ ಇನ್ನೊಬ್ಬಳನ್ನು ಇಷ್ಟಪಡುತ್ತಾನೆ. ಈ ಕತೆಯಲ್ಲಿ ಹೆಣ್ಣುಗಂಡಿನ ಲೈಂಗಿಕತೆಯನ್ನು ರಹಸ್ಯವಾಗಿಯೇ ಇಟ್ಟಿದ್ದಾನೆ. ಇವನು ಫಿನೀಕ್ಸ್ ಹಕ್ಕಿಯಂತೆ ಲೈಂಗಿಕತೆಯಲ್ಲಿ ಸುಟ್ಟು ಇದರಲ್ಲೇ ಇನ್ನೊಂದು ಮರುಹುಟ್ಟನ್ನು ಬಯಸುವ ವ್ಯಕ್ತಿಯಾಗಿದ್ದಾನೆ. ಇಲ್ಲಿನ ಯಾವ ಪಾತ್ರವೂ ತನ್ನನ್ನು ಸರಿಯಾಗಿ ಗುರ್ತಿಸಿಕೊಳ್ಳಲು ಪ್ರಯತ್ನಿಸುವುದಿಲ್ಲ. ಕೊನೆಗೆ ನಿರೂಪಕ ಹೆಣ್ಣುಗಳು ತನ್ನಿಂದ ದೂರವಾಗುತ್ತವೆ ಎಂದು ತಿಳಿದಾಗ ಮಗುವಿನಂತೆ ದುಃಖಿಸುತ್ತಾನೆ. "ನಿನಗೆ ನಿಜವಾಗಿ ಏನು ಬೇಕು ಅನ್ನುವುದು ನನಗೆ ಗೊತ್ತು. ಇಕಾ ಎಂದವಳೇ ಕ್ಷಣದಲ್ಲೆ ಪೂರ್ಣ ನಗ್ನಳಾಗಿ ಬಿಟ್ಟಳು" ಎನ್ನುವ ಸಾಲುಗಳು ಇವನನ್ನು ಅವಮಾನಕ್ಕೆ ಗುರಿಮಾಡುತ್ತವೆ. ದುಃಖಿಸುತ್ತಾನೆ. ಒಬ್ಬಂಟಿತನ ಕಾಡುತ್ತದೆ. ಇಲ್ಲಿ ತಾನೊಬ್ಬ ತಿಳುವಳಿಕೆ ಇಲ್ಲದ ವ್ಯಕ್ತಿಯಂತೆ ಬಾಲಕನಂತೆ ದುಃಖಿಸುತ್ತಾನೆ.

ಲೈಂಗಿಕ ಸಂಬಂಧಕ್ಕೆ ಸಂಬಂಧಿಸಿದಂತೆ ಸ್ವಾತಂತ್ರ್ಯ, ಸಂಘರ್ಷಗಳು ಕಂಡುಬರುವ ಲೇಖಕರ ಸಾಹಿತ್ಯದಲ್ಲಿ ಮೌನವಾಗಿಯೂ ಕೆಲವು ಸಂಬಂಧಗಳು ನಡೆಯುತ್ತವೆ. ಇವು ಕೇವಲ ಮಕ್ಕಳಲ್ಲಿ ಮಾತ್ರ ನಡೆಯುತ್ತವೆ. ಇದು ಪ್ರತಿಯೊಬ್ಬರ ಬಾಲ್ಯಜೀವನದ ಅನುಭವಗಳೂ ಆಗಿರಬಹುದು. 'ಗೋಡೆ' ಕಾದಂಬರಿಯಲ್ಲಿ ಕಿಟ್ಟಿ ಈ ಆಕರ್ಷಣೆಗೆ ಒಳಗಾಗುತ್ತಾನೆ. ಅರಸು ಮೇಷ್ಟ್ರು ಮಗಳು ಮೀನಾಕ್ಷಿ ಎಂದರೆ ಕಿಟ್ಟಿಗೆ ಒಂದು ರೀತಿಯ ಅಕ್ಕರೆ, ಅಭಿಮಾನ, ಪ್ರೀತಿ ಎಲ್ಲವೂ ಆಗಿರುವುದನ್ನು ನೋಡುತ್ತೇವೆ. ಇದು ಕಿಟ್ಟಿಗಷ್ಟೇ ಸೀಮಿತವಾಗಿರದೆ ಮೀನಾಕ್ಷಿಯಲ್ಲಿಯೂ ಇರುವ ಭಾವನೆಗಳೇ ಆಗಿವೆ. ಮೀನಾಕ್ಷಿ ಏನು ಮಾಡಿದರೂ ಇವನಿಗೆ ಇಷ್ಟವೇ. ಮೀನಾಕ್ಷಿಯ ಮನೆಗೆ ಹೋಗುವಾಗ ಅವನು ಸೌಂದರ್ಯಕ್ಕೆ ಹೆಚ್ಚು ಗಮನ ನೀಡುತ್ತಾನೆ. ತಲೆಬಾಚುವುದು ಮುಂತಾದವು. ಇವಳ ಮೈ ಸೋಕಿದರೆ ಗಾರೆ ನೆಲದ ಮೇಲಿದ್ದರೂ ಬೆಚ್ಚಗೆ ಬಿಸಿ ಅನುಭವ ಉಂಟಾಗುತ್ತದೆ. ಎಲ್ಲದರಲ್ಲು ಅವಳೇ ಮುಂದಿರಲಿ ಎಂಬುದು ಅವನ ಆಸೆ. ಜೊತೆಗೆ ಅವಳ ಸಂತೋಷವೇ ಅವನ ಸಂತೋಷವಾಗಿರುತ್ತದೆ. "ಕಿಟ್ಟಿ ಯಾವತ್ತೂ ನೋಡಿರದ ಹಾಗೆ ಮೀನಾಕ್ಷಿಯನ್ನು ದಿಟ್ಟಿಸಿದ. ಎಷ್ಟೇ ನೋಡಿದರೂ ಸಾಕಾಗಲಿಲ್ಲ. ಇದನ್ನು ಗಮನಿಸಿದ ಮೀನಾಕ್ಷಿ ಕ್ಷಣ ನಾಚಿ ಕೆಂಪಾದಳು"[೫] ಬಾಲ್ಯದಲ್ಲಿ ಯಾರು ತಮ್ಮ ಮನಸ್ಸಿಗೆ ಹತ್ತಿರದಲ್ಲಿರುತ್ತಾರೋ ಅವರು ಪರಸ್ಪರ ವಿರುದ್ಧ ಲಿಂಗಗಳು ಆಕರ್ಷಿಸುವುದು ಕಂಡುಬರುತ್ತದೆ. ಇವು ಕೇವಲ ಆಕರ್ಷಣೆಗಳಾಗಿ ಕ್ಷಣ ಕಾಲವಷ್ಟೇ ಇದ್ದು ಮಾಯವಾಗಿಬಿಡುತ್ತವೆ. ಕಿಟ್ಟಿ ಮೀನಾಕ್ಷಿಯನ್ನು 'ಚೆತ್ತಲೆಯ ರಾಜಕುಮಾರಿ'ಯಂತೆ ಕನಸು ಕಂಡರೂ ಅದರ ಪರಿಣಾಮ ಮಾತ್ರ ಶೂನ್ಯವಾಗಿರುತ್ತದೆ. ಬೆಳೆಯುವ ಮನಸ್ಸುಗಳು ಕೆಲವು ಲೈಂಗಿಕ ಆಕರ್ಷಣೆಗಳನ್ನು ಹೊಂದಿರುತ್ತವೆ ಎನ್ನುವ ಮನೋವಿಜ್ಞಾನದ ವಿಚಾರದಂತೆ ಕಂಡುಬರುತ್ತದೆ. ಇದು ತನ್ನ ಬಯಕೆಗಳನ್ನು ಹೊರಹಾಕುತ್ತದೆ.

'ಪರಸಂಗದ ಗೆಂಡೆತಿಮ್ಮ'ದಲ್ಲಿ ಬರುವ ಮುದ್ದನ ಪಾತ್ರ ಇವನಿಗಿಂತ ಭಿನ್ನವಾಗಿದೆ. ಇವನು ತನಗಿಂತಲೂ ವಯಸ್ಸಿನಲ್ಲಿ ಹಿರಿಯಳಾದ ಮರಂಕಿ ವಿಷಯ ಕೇಳಿದರೆ ಸಾಕು ಮೈ-ಮನಸ್ಸಗುಳು ಚಂಚಲಗೊಳ್ಳುತ್ತವೆ. ಇವನು ಯಾವತ್ತೂ ಮರಂಕಿಯನ್ನು ನೋಡಿರುವುದಿಲ್ಲ. ಆದರೂ ಬೇರೆಯವರು ಅವಳ ಸೌಂದರ್ಯವನ್ನು ಹೊಗಳುವುದಕ್ಕೆ ಆಕರ್ಷಣೆಗೊಂಡಿದ್ದು ಅವಳ ಹೆಸರನ್ನು ದೀಪದ ಮಸಿಕಟ್ಟಿನ ಗೋಡೆಯ ಮೇಲೆ ಬರೆಯುವದರೊಂದಿಗೆ

ಹೊರಹಾಕುತ್ತಾನೆ. ಕಿಟ್ಟಿಯಂತೆ ಮುದ್ದನೂ ಕನಸು ಕಂಡರೂ ಮರಂಕಿ ಕೇವಲ ಬಿದಿರಾಳ ಚೆಲುವೆಯಾಗಿ ಕಂಡುಬರುತ್ತಾಳೆ. ಮನಸ್ಸಿಗೆ ಇಷ್ಟವಾದ ಮೇಲೆ ಅವರು ಮಾಡುವ ಕೆಲಸಗಳು ಸರಿಯಾಗಿಯೇ ಇರುತ್ತವೆ ಎಂದು ಭಾವಿಸುವಂತೆ ಮರಂಕಿ ಬಳಸುವ ವಸ್ತುಗಳು ಮನೆಯಲ್ಲಿ ಗದ್ದಲ ಉಂಟುಮಾಡಿದರೂ ಅದು ಅವನಿಗೆ ಅಂಥಾ ಸಮಸ್ಯೆಯೇನೂ ಅಲ್ಲ ಇದು ಇತರರಿಗೆ ಹಿಡಿಸದಿದ್ದರೂ ಇವನ್ನೆಲ್ಲಾ ಉಪಯೋಗಿಸಿದರೇನು ತಪ್ಪು ಎಂದು ಕೊಳ್ಳುತ್ತಾನೆ. ಬಾಲ್ಯದಲ್ಲಿ ಮನಸ್ಸು ಕಣ್ಣಿಗೆ ಕಾಣದಿದ್ದರೂ ಅವುಗಳನ್ನು ಹೇಗೆ ಇಷ್ಟಪಡುತ್ತದೆ, ಬೇರೆಯವರ ಮಾತುಗಳೇ ಎಷ್ಟು ಪ್ರಭಾವ ಬೀರುತ್ತವೆ ಎನ್ನುವುದನ್ನು ಈ ಪಾತ್ರದಲ್ಲಿ ಕಾಣುತ್ತೇವೆ. ಇವನು ಹಳ್ಳಿಯಲ್ಲಿ ಇದ್ದುದರಿಂದ ಅಷ್ಟೊಂದು ಸುಂದರವಾದ ಹೆಣ್ಣನ್ನು ಕಂಡಿರುವುದಿಲ್ಲ. ಅಲ್ಲದೇ ಮರಂಕಿ ಆಧುನಿಕ ವಸ್ತುಗಳನ್ನು ಉಪಯೋಗಿಸುವವಳು ಎಂದು ತಿಳಿದದ್ದೇ ಮರಂಕಿಯ ಬಗ್ಗೆ ಆಕರ್ಷಣೆಗೆ ಒಳಗಾಗುತ್ತಾನೆ. ಇವನ ಭಾವಗಳೂ ಕಿಟ್ಟಿಯ ಭಾವನೆಗಳಂತೆ ಕ್ರಮೇಣ ಮಸುಕಾಗಿ ಮರೆಯಾಗುತ್ತವೆ.

'ಬುಜಂಗಯ್ಯನ ದಶಾವತಾರ' ಕಾದಂಬರಿಯ ಈ ಬಾಲಕನ ಪಾತ್ರದಿಂದ ಚಿತ್ರಿತವಾಗಿದೆ. ಕಿಟ್ಟಿ ಮತ್ತು ಮುದ್ದನಿಗಿಂತ ಭಿನ್ನವಾಗಿ ಚಿತ್ರಿತವಾದ ರಾಜು ಭಿನ್ನವಾದ ಮನಸ್ಥಿತಿ ಮತ್ತು ಅನುಭವವನ್ನು ಹೊಂದುತ್ತಾನೆ. ಸುಶೀಲಾಳ ಬಗ್ಗೆ ಮೊದಲಿನಿಂದಲೂ ಭಾವುಕನಾಗುತ್ತಿರುತ್ತಾನೆ. ಇವಳ ಬಗ್ಗೆ ಆಕರ್ಷಣೆ ಹೊಂದುತ್ತಾನೆ. ಕಾರಣ ಆಕೆಯ ಬಾಲ್ಯವು ಮತ್ತು ನಡೆನುಡಿ, ವಯಸ್ಸಿನಲ್ಲಿ ಅವನು ಕಿಟ್ಟಿ ಮತ್ತು ಮುದ್ದನಿಗಿಂತ ದೊಡ್ಡವನು. ಆದರೂ ಒಂದು ದಿನವೂ ಅವಳೊಂದಿಗೆ ಮುಖಕೊಟ್ಟು ಮಾತಾಡುವುದಿಲ್ಲ. ಬುಜಂಗಯ್ಯ ಇವನ ದೃಷ್ಟಿಯಿಂದ ಪವಾಡ ಪುರುಷನೇ ಆಗಿದ್ದರೂ ಸುಶೀಲಳೊಂದಿಗೆ ಕದ್ದು ಮಾತನಾಡುವುದನ್ನು ನೋಡಿದಾಗ ಅವನ ಬಗ್ಗೆ ಬೇಸರ ಮತ್ತು ಅನುಮಾನ ಪ್ರಾರಂಭವಾಗುತ್ತದೆ. ಮುದ್ದ ಮರಂಕಿಯ ಬಗ್ಗೆ ಎಂಥಾ ವಿಷಯಗಳೆ ಬಂದರೂ ಅವನ ದೃಷ್ಟಿಯಲ್ಲಿ ಅವಳ ಸ್ಪರ್ಷದಿಂದ ಬೆವರಿಳಿಯುತ್ತದೆ. ಹಿತವೆನಿಸುತ್ತದೆ ಮತ್ತು ಭಯವನ್ನುಂಟುಮಾಡುತ್ತದೆ. ಇವುಗಳೇ ರಾಜುವಿನಲ್ಲಿರುವ ಇನ್ನೊಂದು ಮನಸ್ಸಿನ ಆಕರ್ಷಣೆ ಮತ್ತು ಬಯಕೆಗಳನ್ನು ಸೂಚಿಸುತ್ತದೆ. ಮೈಸೂರಿನಲ್ಲಿ ಸುಶೀಲ ಮತ್ತು ರಾಜು ಇಬ್ಬರೂ ಒಟ್ಟಿಗೆ ಮಲಗಿದ್ದಾಗ ರಾಜುವಿಗಾದ ಅನುಭವ ಮತ್ತು ಅವನ ಪ್ರತಿಕ್ರಿಯೆಗಳು ಲೈಂಗಿಕ ಬಯಕೆಗಳನ್ನು ಸೂಚಿಸುತ್ತಿದೆ. ಕಿಟ್ಟಿ-ಮುದ್ದ-ರಾಜುವಿನಲ್ಲಿ ರಾಜುವೊಬ್ಬನೇ ತನ್ನ ಮನಸ್ಸಿಗೆ ಭಾವನೆಗಳಿಗೆ ತಕ್ಕಂತೆ ಪ್ರತಿಕ್ರಿಯಿಸುತ್ತಾನೆ. ಮುದ್ದ-ಕಿಟ್ಟಿ ಇಬ್ಬರೂ ಕೇವಲ ಕನಸಿನಲ್ಲಿ ವ್ಯಕ್ತಪಡಿಸಿದರೇ ರಾಜು ಇನ್ನೂ ಸ್ವಲ್ಪ ಹೆಚ್ಚಿನ ಅನುಭವವನ್ನು ಪಡೆಯುತ್ತಾನೆ.

ಬಾಲಕರಲ್ಲಿ ಮೂಡುವ ಸ್ತ್ರೀ ಆಕರ್ಷಣೆಗಳು ಆಲನಹಳ್ಳಿ ಅವರ ಸಾಹಿತ್ಯದಲ್ಲಿ ಒಂದೇ ಪಾತ್ರವು ಮುಂದುವರಿದಂತೆ ಭಾಸವಾಗುತ್ತದೆ. ಮಗುವಿನ ಮನಸ್ಸು ಹೇಗೆ ಪ್ರತಿಕ್ರಿಯಿಸುತ್ತದೆ ಎಂಬುದರ ಮನೋವಿಶ್ಲೇಷಣೆಗೆ ಅನುಕೂಲವಾಗುವಂತಹ ಹಲವು ಸಂಗತಿಗಳನ್ನು ಲೇಖಕರು ಈ ಬಾಲಕರ ಮೂಲಕ ಚಿತ್ರಿಸಿದ್ದಾರೆ.

## ಅಡಿ ಟಿಪ್ಪಣಿಗಳು

೧. ಜಿ. ಬಿ. ಜೋಷಿ, ಪುಟ ಬಂಗಾರ, (ಕಾಡು), ಪು. ೭೯೩

೨. ಶ್ರೀಕೃಷ್ಣ ಆಲನಹಳ್ಳಿ, ಆಲನಹಳ್ಳಿ ಸಮಗ್ರ ಕಥೆಗಳು, ಪು. ೧೨೪

೩. ಶ್ರೀಕೃಷ್ಣ ಆಲನಹಳ್ಳಿ, ಆಲನಹಳ್ಳಿ ಸಮಗ್ರ ಕಥೆಗಳು, ಪು. ೧೭೪

೪. ಶ್ರೀಕೃಷ್ಣ ಆಲನಹಳ್ಳಿ, ಆಲನಹಳ್ಳಿ ಸಮಗ್ರ ಕಥೆಗಳು, ಪು. ೧೦೪

೫. ಶ್ರೀಕೃಷ್ಣ ಆಲನಹಳ್ಳಿ, ಗೋಡೆ, ಪು. ೯೮

ಅಧ್ಯಾಯ ಎಂಟು

# ಕಥನದ ವೈಶಿಷ್ಟ್ಯಗಳು

ಕಥನ ಶೈಲಿಯಲ್ಲಿ ನವೋದಯಕ್ಕೂ ನವ್ಯ ಕಾಲಘಟ್ಟಕ್ಕೂ ಹಲವಾರು ರೀತಿಯಲ್ಲಿ ಭಿನ್ನತೆಯನ್ನು ಕಾಣಬಹುದು. ರೊಮ್ಯಾಂಟಿಕ್‌ನಿಂದ ಕೂಡಿದ ವರ್ಣನೆಗಳು, ಆದರ್ಶ ಜೀವನ, ಜೀವನ ಮೌಲ್ಯ ಮುಂತಾದವು ನವೋದಯದ ಕಥನ ಸಾಹಿತ್ಯದಲ್ಲಿ ಹೆಚ್ಚಾಗಿಯೇ ಬಳಕೆಯಾಗಿದೆ. ಮನುಷ್ಯ ಮತ್ತು ಸಮಾಜ ಎರಡೂ ಒಂದೇ ಎಂದು ಭಾವಿಸುತ್ತಿದ್ದರು. ಪ್ರಕೃತಿಯ ವರ್ಣನೆ ಸಂಭಾಷಣೆ ಹೆಚ್ಚಾಗಿರುತ್ತಿತ್ತು. ಭಾಷೆ ಕಾವ್ಯಾತ್ಮಕವಾಗಿಯೂ ಕೆಲವೊಮ್ಮೆ ಕಂಡುಬರುತ್ತಿತ್ತು. ಈ ಎಲ್ಲಕ್ಕೂ ವಿರುದ್ಧವಾಗಿ ನವ್ಯ ಕಥನ ಸಾಹಿತ್ಯ ಸೃಷ್ಟಿಯಾಯಿತು. ನಿರೂಪಣೆ ದೃಷ್ಟಿಯಿಂದ ತಾನೂ ಒಂದು ಪಾತ್ರವಾಗಿ ಕತೆ-ಕಾದಂಬರಿಯನ್ನು ಕಟ್ಟುವ ಭಿನ್ನವಾದ ಪ್ರಕಾರವು ಪ್ರಾರಂಭವಾಯಿತು. ಸಮಾಜಕ್ಕೆ ಬದಲಾಗಿ ವ್ಯಕ್ತಿಯೇ ಪ್ರಾಮುಖ್ಯತೆ ಪಡೆಯುತ್ತಾನೆ. ಸ್ವಗತ ರೀತಿಯ ನಿರೂಪಣೆ ಕಂಡುಬರುವುದರಿಂದ ಗದ್ಯವು ಪದ್ಯದ ಲಯದಲ್ಲಿಯೇ ನಡೆಯುತ್ತದೆ. ಸಂಭಾಷಣೆಗೆ ಇಲ್ಲಿ ಅವಕಾಶ ಕಡಿಮೆ. ಇಂತಹ ಭಿನ್ನವಾದ ಕಥನ ಶೈಲಿ ನವ್ಯದ ಕಾಲಘಟ್ಟದಲ್ಲಿ ಹೆಚ್ಚಾಗಿ ಬಳಕೆಯಾಗಿದೆ.

ಶ್ರೀಕೃಷ್ಣ ಆಲನಹಳ್ಳಿ ಅವರ ಮೊದಲ ಕಾದಂಬರಿ 'ಕಾಡು' ದಟ್ಟವಾದ ಗ್ರಾಮೀಣ ಬದುಕನ್ನು ಒಳಗೊಂಡಿರುವ ಒಂದು ಚಿಕ್ಕ ಕಾದಂಬರಿ. ಕತೆಯಲ್ಲಿ ಬರುವ ಎರಡು ಊರುಗಳಲ್ಲಿಯೂ ಕೃಷಿಯೇ ಪ್ರಧಾನವಾಗಿದೆ. ಇವರು ಕೇವಲ ಊಳಿಗಮಾನ್ಯ ಪದ್ಧತಿಯನ್ನು ಕಟ್ಟಿಕೊಡದೆ ಇತರ ಜಾತಿಗಳ ದಾರುಣವಾದ ಜೀವನವನ್ನು ಹೇಳುತ್ತಾರೆ. ಹಳ್ಳಿಗಳ ಸಾಂಪ್ರದಾಯಿಕ ಕೃಷಿ ಪದ್ಧತಿ, ತನ್ನ ದೇಸಿತನವನ್ನು ಉಳಿಸಿಕೊಂಡಿದೆ. ಚಿಕ್ಕದಾದ ಈ ಕಾದಂಬರಿ ಪಾತ್ರಗಳ ದೃಷ್ಟಿಯಿಂದ ಕಡಿಮೆಯೇನೂ ಇಲ್ಲ. ಕಿಟ್ಟಿಯ ಮುಗ್ಧ ಮನಸ್ಸಿನಿಂದ ಕೃತಿಯಲ್ಲಿರುವ ಸಮಾಜವನ್ನು ನೋಡುವ ಪ್ರಯತ್ನ ಇಲ್ಲಿ ವಿಶೇಷವಾಗಿದೆ.

ನಿರೂಪಣೆಯ ದೃಷ್ಟಿಯಿಂದ ಇದು ಪ್ರಥಮ ಪುರುಷ ನಿರೂಪಣೆಯಾಗಿದೆ. ಸಮಾಜವನ್ನು ದೂರದಲ್ಲಿ ನಿಂತು ನೋಡುತ್ತಾನೆಯೇ ಹೊರತು ಪಾತ್ರಗಳ ಅಂತರಂಗದ ಭಾವನೆಗಳ ಆಳಕ್ಕೆ ಇಳಿಯುವುದಿಲ್ಲ. ಇಲ್ಲಿ ಹಳ್ಳಿಯ ಗ್ರಾಮೀಣ ಭಾಷೆನ್ನೆ ಹೆಚ್ಚಾಗಿ ಬಳಕೆಮಾಡಿದ್ದಾರೆ. ನುಡಿಗಟ್ಟುಗಳು, ಗಾದೆಗಳು ಅಲ್ಲಲ್ಲಿ ಕಾಣಿಸಿಕೊಳ್ಳುತ್ತವೆ. ದಟ್ಟವಾದ ಗ್ರಾಮೀಣ ಬದುಕಿನ ಭಾಷೆಯನ್ನು ಮೆರೆಸಿದ್ದಾರೆ. ಜೊತೆಗೆ ಪ್ರತಿಮೆ, ಸಂಕೇತಗಳು ನಿರೂಪಣೆಯಲ್ಲಿ ಬರುತ್ತವೆ. ಇವು ಇವರ ಎಲ್ಲಾ ಕತೆ-ಕಾದಬಂರಿಗಳಲ್ಲಿ ನೋಡಬಹುದು.

'ಹಲ್ಕರಂಡೆ ಇನ್ನೇನೆಲ್ಲ ಹೇಳ್ದ ಬೊಗಳು, ಅವನು ಕರ್‍ದ ಅಂತ ನೀಯಾಕೆ ಹೋಗಿದ್ದೆ'[1]

'ಬಾ ಚಂದ್ರಪ್ಪ ಹೋಗ್ಲಿ ಹೆಣ್ಣಹೆಂಗ್ಸು, ಬಡ್ಡಿಮಗೆಲ್ಲೊ ಕಾಸ್ನಾಸೆ ತೋರ್‍ಸವನೆ ಅಂತ ಕಾಣ್ತದೆ'[2]

'ಬುಡಯ್ಯ ನಾನೇನು ನಿನ್ನ ಹಟ್ಟಿಗೆ ಬಂದಿತ್ತಿಲ್ಲ'[3]

ಇವೆಲ್ಲಾ ಕೇವಲ ಹಳ್ಳಿಯ ಭಾಷೆಯಾಗಿರದೆ ಇಡೀ ಹಳ್ಳಿಯ ಸ್ಥಿತಿಗತಿಯನ್ನು ಹೇಳುವ ಸೂಕ್ಷ್ಮ ವಿವರಗಳೂ ಆಗಬಹುದಾದ ಸಾಧ್ಯತೆ ಇದೆ. ಇಂತಹ ಭಾಷೆ ದಟ್ಟವಾಗಿ ಬಂದಿರುವುದರಿಂದ ಹಳ್ಳಿತನವೇ ತುಂಬಿಕೊಂಡಿದೆ.

ನಿರೂಪಣೆಯಲ್ಲಿ ಎಲ್ಲಿಯೂ ರಮ್ಯತೆ ಕಾಣುವುದಿಲ್ಲ. ನವೋದಯಕ್ಕಿಂತ ಭಿನ್ನವಾದ ನಿರೂಪಣೆ ಮತ್ತು ಪಾತ್ರ ವೈವಿಧ್ಯತೆ ಇಲ್ಲಿದೆ.

'ಗೋಡೆ' ಕಾದಂಬರಿ 'ಕಾಡು'ವಿನ ಮುಂದುವರಿದ ಭಾಗದಂತಿದೆ. ಕಾರಣ ಕಾಡುವಿನಲ್ಲಿ ಬರುವ ಹಲವು ಪಾತ್ರಗಳು ಈ ಕಾದಂಬರಿಯಲ್ಲೂ ತಮ್ಮನ್ನು ಗುರ್ತಿಸಿಕೊಳ್ಳುತ್ತವೆ. ಕಿಟ್ಟಿ ಎಂಬ ಬಾಲಕನ ಪಾತ್ರವು ಕಾಡುವಿನಿಂದ ಪ್ರಾರಂಭವಾಗಿ ಈ ಕಾದಂಬರಿಯಲ್ಲಿ ಮುಕ್ತಾಯವಾಗುವ ಸಂಬಂಧವನ್ನು ಹೊಂದಿದೆ. ಇಲ್ಲಿ ಅವನು ಮುಗ್ಧನಾಗಿರದೆ ಬೌದ್ಧಿಕವಾಗಿ ತಿಳಿದುಕೊಂಡವನಾಗಿದ್ದಾನೆ. ವಸ್ತುವಿನ ದೃಷ್ಟಿಯಿಂದಲೂ ಈ ಎರಡೂ ಒಂದೇ ಆಗಿವೆ. ನಿರೂಪಣೆ ಮತ್ತು ಭಾಷೆಯ ದೃಷ್ಟಿಯಿಂದಲೂ ಸಾಮ್ಯತೆ ಇದೆ. ಈ ರೀತಿ ಒಂದು ಕಾದಂಬರಿಯಿಂದ ಇನ್ನೊಂದು ಕಾದಂಬರಿಗೆ ಸಂಬಂಧ ಕಲ್ಪಿಸಿದಂತೆ ಕಾಣಿಸುವ ಕತೆ-ಕಾದಂಬರಿಗಳು ಕನ್ನಡದಲ್ಲಿ ತುಂಬಾ ಕಡಿಮೆ. ಅಂತಹ ಒಂದು ಪ್ರಯತ್ನವನ್ನು ಈ ಲೇಖಕರ ಕೃತಿಗಳಲ್ಲಿ ಕಾಣುತ್ತೇವೆ.

'ಕಾಡು' ಕಾದಂಬರಿಯಲ್ಲಿ ಬಾಲಕ ಕಿಟ್ಟಿ ಮುಗ್ಧ. ಆದರೆ ಇಲ್ಲಿನ ಕಿಟ್ಟಿ ಸಮಾಜವನ್ನು ಸೂಕ್ಷ್ಮವಾಗಿ ಗ್ರಹಿಸುವ ಪ್ರಜ್ಞೆಯುಳ್ಳವನಾಗಿದ್ದಾನೆ. ಪಾತ್ರಗಳ ಬೆಳವಣಿಗೆಯನ್ನು ಅದರ ದೈಹಿಕ ಬೆಳವಣಿಗೆಯೊಂದಿಗೆ ಗುರ್ತಿಸದೇ ಆ ಪಾತ್ರಗಳ ಮಾನಸಿಕ, ಬೌದ್ಧಿಕ ಸಾಮರ್ಥ್ಯದಲ್ಲಿ ಹೇಳುವುದೂ ವಿಶೇಷವಾಗಿದೆ. ಮೊದಲ ಕಾದಂಬರಿಯ ಮುಂದುವರೆದ ಭಾಗದಂತೆ ಕಂಡುಬಂದರೂ ಇದರ ಕೊನೆ ಮಾತ್ರ ಅಪೂರ್ಣವಾಗಿಯೇ ಇದೆ.

'ಪರಸಂಗದ ಗೆಂಡೆತಿಮ್ಮ' ಕಾದಂಬರಿಯು ಹರಹುವಿನಲ್ಲಿ ದೊಡ್ಡದಾಗಿದೆ. ಗ್ರಾಮೀಣ ಬದುಕಿನ ಜೊತೆಗೆ ನಗರ ಬದುಕನ್ನು ಸೂಕ್ಷ್ಮವಾಗಿ ಕಟ್ಟಿಕೊಡುವ ಪ್ರಯತ್ನ ಲೇಖಕರದು. ಮೈಸೂರು ಮಂಡ್ಯ ಜಿಲ್ಲೆಯ ಸಾಲುಂಡಿ ಮತ್ತು ಗೌವಳ್ಳಿಯ ಗ್ರಾಮಜೀವನವನ್ನು ಇಲ್ಲಿ ತಂದಿದ್ದಾರೆ. ಕಾದಂಬರಿಯ ವಸ್ತು ಸಂಪ್ರದಾಯ ಮತ್ತು ಆಧುನಿಕತೆಯ ನಡುವಿನ ಸಂಘರ್ಷವಾಗಿದೆ. ಹಳ್ಳಿಗಳಲ್ಲೇ ಈ ಲೇಖಕರು ಬಾಲ್ಯವನ್ನು ಕಳೆದದ್ದರಿಂದ ಕೃಷಿ ಬದುಕಿನ ಹಳ್ಳಿಗಳನ್ನು ಚಿತ್ರಿಸಿದ್ದಾರೆ. ವ್ಯಾಪಾರಿ ಸಂಸ್ಕೃತಿಯ ಪರಿಚಯವನ್ನು ಈ ಕಾದಂಬರಿಯ ಮೂಲಕ ಹೇಳುತ್ತಾ ಅದರ ದುರಂತವನ್ನು ಜೊತೆಗೆ ತರುತ್ತಾರೆ. ಇಲ್ಲಿ ನಿರೂಪಣೆಯೇ ಹೆಚ್ಚಾಗಿದೆ. ಒಬ್ಬ ವ್ಯಕ್ತಿ ಒಂದು ಸಮಾಜದಲ್ಲಿ ನಡೆಯುತ್ತಿರುವ ಘಟನೆಗಳನ್ನು ಹೇಳುವಂತಹ ನಿರೂಪಣೆಯಾಗಿದೆ. ಇದನ್ನು ಲೇಖಕರ ಮಾತಿನಿಂದಲೇ ತಿಳಿಯಬಹುದು. ಕಥನ ನಿರೂಪಣೆಯಲ್ಲಿ ಹೆಚ್ಚಾಗಿ ಗ್ರಾಮೀಣ ಭಾಷೆಯೇ ಇದೆ. ನಾಗರೀಕತೆಯ ಪ್ರಭಾವ ಇದ್ದಾಗಲೂ ಭಾಷೆಯ ದೃಷ್ಟಿಯಲ್ಲಿ ಇದು ಗ್ರಾಮೀಣವೇ.

'ಅಪ್ಪಿಲ್ಲದ ಮೊಗ ಅಂತ ನಾನೂ ವಸಿ ಮುದ್ನಲ್ಲೆ ಸಾಕ್ಬುಟ್ಟೆ, ಬೈದು ವಗತನಾ ಕಲ್ಸಿ, ನಾಯೇನು ಬ್ಯಾಡ ಅಂತೀನ'[೪]

'ಇವನವ್ವಂದು.... ಬ್ಯಾಲದ ಮುಳ್ಳು ಯಂಗೀರಾಕ್ಬುಟ್ಟದೆ...'[೫]

'ನಾಕು ಜನ ಮಾನಮರ್ರ್ಯಾದಿಗೆ ಬದಕವ್ರೆಲ್ಲ ವಸಿ ಕೇಳಿ... ಈ ದೇಸಕೆಡ್ಸಿ ಬಂದಿರೊ ಸೂಳಿಮಗ ಕುಂತವ್ನೆ ನೋಡಿ...'[೬]

ಈ ರೀತಿಯ ಗ್ರಾಮೀಣ ಭಾಷೆಯು ಇಡೀ ನಿರೂಪಣೆಯಲ್ಲಿ ಕಂಡುಬರುತ್ತದೆ. ಇಲ್ಲಿಯೂ ಪಾತ್ರಗಳ ಒಳತುಡಿತಗಳು, ತುಮುಲಗಳು, ನೋವು, ಯಾತನೆ ಕಣ್ಣಿಗೆ ಕಟ್ಟುವಂತೆ ಕಂಡುಬಂದು ಕತೆ ಸರಳವಾದ ನಿರೂಪಣೆಯಲ್ಲಿ ಓದುಗರನ್ನು ಆಕರ್ಷಿಸುತ್ತದೆ. ಇದೊಂದು ರೀತಿಯಲ್ಲಿ ಕಲ್ಪಿತ ಕತೆಯನ್ನು ಹೇಳುವ ಜಾನಪದ ಶೈಲಿಗೆ ಹತ್ತಿರವಾಗಿದೆ.

ಭುಜಂಗಯ್ಯನ ದಶಾವತಾರಗಳು ಕಾದಂಬರಿ ಲೇಖಕರ ಮಹತ್ವದ ಕೃತಿಯಾಗಿದೆ. ಮೊದಲೆರಡು ಕಾದಂಬರಿಗಳಿಗಿಂತಲೂ ಇದರ ಹರಹು ದೊಡ್ಡದು. ಭಾಷೆ, ಶೈಲಿ, ಪಾತ್ರಗಳು, ಆಶಯ ಇವುಗಳಿಂದ ಇದು

ಭಿನ್ನವಾಗುವುದಿಲ್ಲ. ಇದನ್ನು 'ಸಾಮಾನ್ಯ ಮನುಷ್ಯನೊಬ್ಬನ ಮಹಾಕಾವ್ಯ' ಎಂದೂ ಕರೆದಿದ್ದಾರೆ. ಏಕೆಂದರೆ ಈ ಕಾಲಕ್ಕಾಗಲೇ ಕನ್ನಡದಲ್ಲಿ ಈ ರೀತಿಯ ಬೃಹತ್ ಕಾದಂಬರಿಗಳು ಕಂಡುಬಂದು ಅವು ಈ ಲೇಖಕರ ಮೇಲೆ ಪ್ರಭಾವ ಬೀರಿವೆ. ಆ ಪರಂಪರೆಯಲ್ಲಿ ಕಾದಂಬರಿ ರಚಿಸುವುದು ಈ ಲೇಖಕರ ಮತ್ತೊಂದು ವೈಶಿಷ್ಟ್ಯವೇ ಆಗಿದೆ. ಇವರ ಕಾದಂಬರಿಗಳಷ್ಟೇ ಅಲ್ಲದೆ ಇವರ ಕತೆಗಳಲ್ಲೂ ಸ್ವಗತ ಮಾದರಿ ನಿರೂಪಣೆ ಹೆಚ್ಚಾಗಿದೆ. ಗ್ರಾಮೀಣ ಬದುಕಿನ ಸಹಜವಾದ ಆಡುಭಾಷೆ ದಟ್ಟವಾಗಿಯೇ ಇದೆ. ಮೈಸೂರು ಜಿಲ್ಲೆ ಹೆಗ್ಗಡದೇವನ ಕೋಟೆ ತಾಲ್ಲೂಕಿನ ಗ್ರಾಮೀಣ ಭಾಷೆಯನ್ನು ಸಮರ್ಥವಾಗಿಯೇ ಕಾದಂಬರಿಯಲ್ಲಿ ತಂದಿದ್ದಾರೆ. ಇಲ್ಲಿ ಪಾತ್ರಗಳಿಗೆ ತಕ್ಕಂತೆ ಭಾಷೆಯನ್ನು ಹೊಂದಿಸಿ ಕೊಟ್ಟಿದ್ದಾರೆ. ಗ್ರಾಮೀಣ ಪದಗಳು, ನುಡಿಗಟ್ಟುಗಳು ಈ ಭಾಷೆಯಲ್ಲಿವೆ. ಇಲ್ಲಿ ಕಾವ್ಯಾತ್ಮಕವಾದ ಗದ್ಯದಲ್ಲಿಯೇ ಹಾಸ್ಯ, ಹರಟೆ, ಸಂಭಾಷಣೆ ಮುಂತಾದವುಗಳು ನಿರೂಪಣೆಯಲ್ಲಿ ಸೇರಿಕೊಂಡಿವೆ.

ಉತ್ತಮ ಜಾತಿಯವರು ಮಡಿವಂತಿಕೆಯ ಸಾಂಪ್ರದಾಯಿಕ ಸಂಗತಿಗಳಿಗೆ ಕಟ್ಟುಬೀಳದೆ ಬದುಕನ್ನು ಉತ್ತಮಗೊಳಿಸಿಕೊಳ್ಳಲು ಪ್ರಗತಿಪರ ಆಧುನಿಕ ಆಲೋಚನೆಗಳೊಂದಿಗೆ ಸಂಪ್ರದಾಯದ, ಜಾತಿಯ, ಧರ್ಮದ ಮತ್ತು ವಯಸ್ಸಿನ ಕಟ್ಟುಕಟ್ಟಳೆಗಳನ್ನು ಮೀರಬೇಕಾದ್ದು ಅನಿವಾರ್ಯ ಎಂಬ ಧ್ವನಿ ಈ ಕಾದಂಬರಿಯಲ್ಲಿದೆ.

'ತಪ್ತ' ಕತೆಯು ನವ್ಯ ಕತೆಗಳ ಸಾಲಿನಲ್ಲಿ ನಿಲ್ಲುವ ಕತೆಯಾಗಿದೆ. ಗ್ರಾಮೀಣ ಬದುಕಿನ ಅಗಾಧವಾದ ಅನುಭವವನ್ನು ಇದರಲ್ಲಿ ಹಂಚಿಕೊಂಡಿದ್ದಾರೆ. ಕತೆಯಲ್ಲಿ ನಿರೂಪಕ ತನ್ನ ಕತೆಯನ್ನು ತಾನೇ ನಿರೂಪಿಸಿಕೊಳ್ಳುವ ಕ್ರಮದಂತಿದೆ. ಹೀಗೆ ಕತೆ ಹೇಳುವಾಗ ತನ್ನ ಅಂತರಂಗದಲ್ಲಿ ನಡೆಯುವ ತಳಮಳ, ನೋವು, ಅನುಕಂಪ ಮುಂತಾದವುಗಳನ್ನು ಹೊರಹಾಕುತ್ತಾನೆ. ಇಲ್ಲಿ ಎಲ್ಲಿಯೂ ಸಂಭಾಷಣೆ ಕಂಡುಬರುವುದಿಲ್ಲ. ಆದರೆ ಈ ಗದ್ಯದಲ್ಲಿ ಕಾವ್ಯದ ಲಯವಿದೆ ಎಂಬುದನ್ನು ಗುರ್ತಿಸಬಹುದು. ಕೆಲವು ಕಡೆ ಕಾವ್ಯದ ಶೈಲಿಯಲ್ಲಿಯೇ ನಿರೂಪಣೆ ಸಾಗುತ್ತದೆ. ಮತ್ತೊಂದು ಅಂಶವೆಂದರೆ ಭಾಷೆಯ ಬಳಕೆ ಇದರಲ್ಲಿ ಗ್ರಾಮೀಣ ಮತ್ತು ನಗರದಲ್ಲಿ ಬಳಸುವ ಭಾಷೆ ಇದೆ. ನಿರೂಪಕನ ತಾಯಿ ಗ್ರಾಮೀಣ ಭಾಷೆಯನ್ನು ಪ್ರತಿನಿಧಿಸಿದರೆ ನಿರೂಪಕನಲ್ಲಿ ಶಿಕ್ಷಣವನ್ನು ಪಡೆದ ವಿದ್ಯಾವಂತನ ನಯವಾದ ಭಾಷೆ ಕಂಡುಬರುತ್ತದೆ. ಗ್ರಾಮೀಣರ ನಂಬಿಕೆ, ಆಚರಣೆಗಳು, ಬಿಕ್ಕಟ್ಟುಗಳು ಈ ಕತೆಯಲ್ಲಿವೆ. ಹಲ್ಲಿಯೊಂದು ಲೊಚಗುಟ್ಟಿತು. ಅವ್ವ ರಾಮಕೃಷ್ಣ ಎಂದು ಮಗ್ಗಲು ಬದಲಾಯಿಸಿದರು' ಎನ್ನುವಂತಹವುಗಳು ಸಹಜ ಬದುಕಿನ ಕ್ಷಣಗಳ ಚಿತ್ರಣ ಕತೆಯಲ್ಲಿ ಬಳಕೆಯಾಗಿವೆ.

ಬೆಳಗಾಗುತ್ತಿದೆ

ನನ್ನ ಬದುಕೆಲ್ಲ ಬೆಳಕಿನಲ್ಲಿ ಕತ್ತಲೆಯಾಗಿ ಬಿಡುತ್ತದೆ.

ಅಯ್ಯೋ ಬೆಳಗಾಗುವುದೇ ಬೇಡ.

ಕತ್ತಲೆಯೇ ಇರಲಿ

ಇಲ್ಲೇ ಬದುಕುತ್ತೇನೆ.

ನನ್ನ ವಿಚಾರವಾದಿತ್ವವೆಲ್ಲಾ

ಯೋಚಿಸುವ ಶಕ್ತಿಯೆಲ್ಲ ಹಾಳಾಗಿ ಹೋಗಲಿ.

ಶೂನ್ಯದಲ್ಲಿ ಶೂನ್ಯನಾಗುತ್ತೇನೆ.

ಏನೂ ಸಾಧಿಸುವುದು ಬೇಡ...[೬]

ಎನ್ನುವ ಸರಳವಾದ ಗದ್ಯ ನಿರೂಪಣೆಯಲ್ಲಿ ಕಾವ್ಯ ಭಾಷೆ ಮತ್ತು ಲಯವನ್ನು ಗುರ್ತಿಸಬಹುದು. ಇದು ಇವರ ಕಥನ ನಿರೂಪಣೆಯ ವೈಶಿಷ್ಟ್ಯವೂ ಆಗಿದೆ. ಮತ್ತು ನಿರೂಪಕನ ಮನಸ್ಸಿನ ಅಂತರಾಳದಲ್ಲಿ ನಡೆಯುವ ತಳಮಳವನ್ನು ಹೇಳುವ ರೀತಿಯೂ ಆಗಿದೆ. ಇಂತಹ ರಚನಾ ಶೈಲಿಯೇ ಒಬ್ಬ ಲೇಖಕನನ್ನು ಇತರರಿಗಿಂತ ಭಿನ್ನವಾಗಿ ನೋಡುವಂತೆ ಮಾಡುತ್ತದೆ.

'ತಪ್ತ' ಕತೆಯಂತೆ 'ತೊರೆ' ಕತೆಯೂ ಗ್ರಾಮೀಣ ಬದುಕನ್ನೆ ಹೇಳುವ ಕತೆ. ಇಲ್ಲಿ ಗ್ರಾಮೀಣ ಜನರ ಕಳ್ಳುಬಳ್ಳಿಯ ಪ್ರಶ್ನೆಗಳೇ ಹೆಚ್ಚಾಗಿ ಕಂಡುಬರುತ್ತವೆ. ಎರಡರಲ್ಲಿಯೂ ಕಳ್ಳುಬಳ್ಳಿಯ ಒಳಗಿನ ವಿವಾಹಕ್ಕೆ ಸಂಬಂಧಿಸಿದ ವಸ್ತುವಿದೆ. ಆದರೆ 'ತೊರೆ'ಯ ನಿರೂಪಕ ತನ್ನ ಕುಟುಂಬದಲ್ಲಿ ನಡೆಯುವ ಕತೆಯನ್ನು ಹೇಳುವಂತಿದೆ. ಮತ್ತು ಇಲ್ಲಿನ ಪಾತ್ರಗಳು ತಮ್ಮ ನಿರೂಪಣೆಯನ್ನು ತಾವೇ ಮಾಡಿಕೊಳ್ಳುವಂತೆ ಕೆಲವೊಮ್ಮೆ ಕಾಣುತ್ತದೆ. ಇಲ್ಲಿಯೂ ಸಹ ಸಂಭಾಷಣೆ ಕಡಿಮೆ. ಕತೆ ಹೇಳುವುದೇ ಹೆಚ್ಚಾಗಿದೆ. ಹಳ್ಳಿಯ ಕತೆ ಎಂದಾಗ ಭಾಷೆಯೂ ಗ್ರಾಮೀಣದ್ದಾಗಿದೆ. 'ಬೇಗ ಕರ್ಕೊಳ್ರವ್ವ ಆಳಾದ್ದು ಸೊರ ಇರಕಿಸ್ಕೊತದೆ'[8] ಎನ್ನುವ ಮಾತುಗಳಲ್ಲೇ ಗ್ರಾಮೀಣ ಬದುಕನ್ನು ಹೇಳುತ್ತಾರೆ. ಇಲ್ಲಿ ವರ್ಣನೆಗಳಿಗೆ ಅವಕಾಶವಿಲ್ಲ. ರಮ್ಯ ನಿರೂಪಣೆ ಅಥವಾ ಸ್ವಗತ ರೀತಿಯ ನಿರೂಪಣೆ ಅಷ್ಟಾಗಿ ಕಂಡುಬರುವುದಿಲ್ಲ. ಆದರೇ ತಮ್ಮ ಅನುಭವಗಳನ್ನು ಹೇಳಿಕೊಳ್ಳುವಂತೆ ಆ ಪಾತ್ರಗಳಲ್ಲಿ ಕಂಡುಬರುತ್ತದೆ. ಕತೆ ಒಂದು ಸೀಮಿತ ಕಾಲಾವಧಿಯ ವರೆಗೆ ನಡೆಯುವುದನ್ನು ನೋಡುತ್ತೇವೆ.

'ಸೀಮಂತ', 'ಹುತ್ತ', 'ಶ್ರಾವಣ', ಈ ಮೂರು ಕತೆಗಳಲ್ಲಿಯೂ ಕಾಮವೇ ಪ್ರಧಾನ ವಸ್ತುವಾಗಿದೆ. ಕತೆಗಳಲ್ಲಿ ಹೆಚ್ಚಾಗಿ ಕಾಮವನ್ನೇ ಕತೆಯ ವಸ್ತುವಾಗಿ ತೆಗೆದುಕೊಂಡ ಪ್ರಧಾನ ಲೇಖಕರಲ್ಲಿ ಆಲನಹಳ್ಳಿ ಅವರೂ ಪ್ರಮುಖರಾಗಿದ್ದಾರೆ. ಇವರ ಎಲ್ಲಾ ಕತೆಗಳಲ್ಲಿಯೂ ಕಾಮ ಪ್ರೇಮದ ಪ್ರಸ್ತಾಪವಿಲ್ಲದೆ ಪೂರ್ಣವಾಗುವುದಿಲ್ಲ. ಮತ್ತು ಈ ಕತೆಗಳು ನಗರ ಜೀವನವನ್ನು ಹೇಳುವ ಕತೆಗಳಾಗಿವೆ. ಅದಕ್ಕೂ ಮೊದಲು ಇಲ್ಲಿನ ಪಾತ್ರಗಳು ಬಳಸುವ ಭಾಷೆ ಗ್ರಾಮೀಣವನ್ನೊಳಗೊಂಡ ನಗರಜೀವನದ ಸರಳ ಭಾಷೆ.

'ಸೀಮಂತ' ಕಥೆ ನಿರೂಪಣೆಯ ದೃಷ್ಟಿಯಿಂದ ಸಹಜ ಮತ್ತು ನೈಜತೆಯಿದೆ. ಸಂಭಾಷಣೆಯೂ ಎಲ್ಲಾ ಕತೆಗಳಂತೆಯೇ ಇಲ್ಲಿ ಕಡಿಮೆ. ನಿರೂಪಣೆಯ ಜೊತೆ ಸಂಭಾಷಣೆಯೂ ಸಮಸಮನಾಗಿ ಬಂದಿರುವ ಕತೆ 'ಶ್ರಾವಣ'. ಇದರಲ್ಲಿನ ಸಂಭಾಷಣೆ ಇಬ್ಬರು ಸ್ತ್ರೀಯರ ನಡುವೆ ನಡೆಯುವುದಾದರೂ ಮೊದಲು ನಿರೂಪಕ ಒಂದು ಕಾಲದವರೆಗೆ ಕತೆಯನ್ನು ಹೇಳಿ ಅನಂತರ ಅವರಿಬ್ಬರ ಸಂಭಾಷಣೆಯನ್ನು ಮಧ್ಯದಲ್ಲಿ ತರುತ್ತಾನೆ. ಹೆಣ್ಣಿನ ಮಾನಸಿಕ ಭಾವನೆಗಳು ತುಡಿತಗಳು, ಬಯಕೆಗಳನ್ನು ಲೇಖಕರು ಚೆನ್ನಾಗಿಯೇ ತೋರಿಸಿಕೊಡುತ್ತಾರೆ. ಕೇವಲ ಸಂಭಾಷಣೆಯಲ್ಲಿಯೇ ಕತೆ ಪ್ರಾರಂಭವಾಗಿ ಮುಕ್ತಾಯವಾಗುವುದು ಪ್ರಗತಿಶೀಲರ ಶೈಲಿಯಾದರೆ ಸಂಭಾಷಣೆಯ ಜೊತೆ ಅದನ್ನು ನಡೆಸಿಕೊಂಡು ಹೋಗುವ ನಿರೂಪಣೆಯ ಶೈಲಿ ನವ್ಯ ಕತೆಗಳ ವೈಶಿಷ್ಟ್ಯತೆ. ಈ ಕತೆಗಳಲ್ಲಿ ವಿದ್ಯಾವಂತ ಸಮಾಜದ ತರುಣರು ಬರುವುದರಿಂದ ನಾಗರಿಕ ಸಮಾಜದ ಭಾಷೆ ಕಾಣುತ್ತೇವೆ. ಕಾಲೇಜು ಜೀವನ, ಯೌವನದ ಬಯಕೆಗಳು ನಿರೂಪಣೆಯಲ್ಲಿ ಸೇರಿಕೊಂಡು ಕತೆ ವೈಶಿಷ್ಟ್ಯತೆಯನ್ನು ಪಡೆದುಕೊಂಡಿದೆ. ಹಾಗೂ ನಿರೂಪಣೆ ಕೆಲವೊಮ್ಮೆ ಅಂತರ್‌ಮುಖಿಯಾಗುತ್ತದೆ.

'ಹುತ್ತ' ಕಥೆಯೂ ನಾಗರೀಕ ಬದುಕಿನ ಅತ್ಯಂತ ಸೂಕ್ಷ್ಮ ವಿವರಗಳನ್ನು ಕಟ್ಟಿಕೊಡುವ ಕಥೆ. ನಗರ ಬದುಕಿನ ಜೀವನ ಶೈಲಿಯಲ್ಲಿ ಮತ್ತು ಗ್ರಾಮೀಣ ಜೀವನ ಶೈಲಿಯನ್ನು ಮುಖಾಮುಖಿಯಾಗಿಸಿದ್ದಾರೆ. ಆಲನಹಳ್ಳಿ ಅವರಿಗೆ ಈ ಎರಡರ ಅನುಭವವೂ ಅಗಾಧವಾಗಿದ್ದುದು ಈ ಕತೆಯಲ್ಲಿ ಕಂಡುಬರುತ್ತದೆ. ಇಲ್ಲಿಯೂ ನಿರೂಪಕನದೇ ನಾಯಕ ಪಾತ್ರ. ಕೆಲವು ಕಡೆ ಸಂಭಾಷಣೆ ಕಂಡುಬಂದು ತಟ್ಟನೆ ಅದನ್ನು ನಿಲ್ಲಿಸಿ ಮತ್ತೇ ನಿರೂಪಣೆಗೆ ತಿರುಗುವುದು ಕತೆಯನ್ನು ಓದುವ ಓದುಗರಿಗೆ ಭಾಸವಾಗುತ್ತದೆ. ಕಾಲೇಜು ಜೀವನ, ಯೌವನ, ಪ್ರೀತಿ, ಪ್ರಣಯಗಳು ನಿರೂಪಕನಲ್ಲಿ ಕಂಡಾಗ ಕಾವ್ಯಾತ್ಮಕವಾದ ಭಾಷೆ ಕಂಡುಬರುತ್ತದೆ. ಗದ್ಯ ಮತ್ತು ಪದ್ಯದ ಲಯ ಎರಡೂ ಇದರಲ್ಲಿ ಸೇರಿಕೊಂಡಿವೆ.

ಹೀಗೆ ದುರ್ಬಲವಾದಾಗ –

ತಲೆಮರೆಸಿಕೊಂಡಿದ್ದ ಕಾಡುಮೃಗಗಳು,

ದಡದಡ ನುಗ್ಗಿ ಬರುತ್ತವೆ:

ದುರಂತ ಸಂಭವಿಸುತ್ತದೆ,

ಹಾಳಾಗಲಿ - ಯಾರಿಗೆ ಬೇಕು ಇದೆಲ್ಲ?'

ರೂಮಿಗೆ ಬಂದೆ: ಬಂದವನೆ –

ಅವ್ವನ ಕಾಗದ ಕಂಡು ಹಾಯೆನಿಸಿ

ಹುಟ್ಟು ನೆಲದ ವಾಸನೆ ಘಮಘಮಿಸಿ

ಚಿತ್ತದಾಳದಿಂದ ಮೂಡಿ ಬಂದ ಅವ್ವನನ್ನು ಕಂಡು ಸುಖ ಪಟ್ಟೆ.[೮೯]

ಈ ಯುವಕ ದಟ್ಟವಾದ ಗ್ರಾಮೀಣ ಅನುಭವವನ್ನು ಹೊಂದಿದ್ದು ನಗರದ ಬದುಕಿನೊಂದಿಗೆ ಸಂಘರ್ಷವನ್ನು ಮಾಡುತ್ತಾನೆ. ಅವನು ಗ್ರಾಮೀಣ ಮುಗ್ಧನಾಗಿದ್ದು ಇಂತಹ ಮುಗ್ಧ ಮನಸ್ಥಿತಿಯನ್ನು ಒಳಗೊಂಡು ಕತೆ ಹೇಳುವುದು ಲೇಖಕರ ಉದ್ದೇಶವಾಗಿದೆ.

ನವ್ಯದ ಹಲವು ಧೋರಣೆಗಳು ಕಂಡುಬರುವುದು 'ಸಂಬಂಧ' ಕತೆಯಲ್ಲಿ. ಇದೂ ಸಹ ನವೋದಯಕ್ಕೆ ಭಿನ್ನವಾದ ಶೈಲಿಯನ್ನು ಹೊಂದಿದೆ. ನಿರೂಪಿಸುತ್ತಲೇ ತಾನೂ ಒಂದು ಪಾತ್ರವಾಗುವ ಮೂಲಕ ಮಾನವೀಯತೆಯನ್ನು ಶ್ರೇಷ್ಠ ಮೌಲ್ಯವನ್ನಾಗಿಸುವುದು ಕತೆಯಲ್ಲಿ ಧ್ವನಿಸುತ್ತದೆ. ಇಲ್ಲಿ ಲೇಖಕರು ಅಕ್ಷರ ಜ್ಞಾನದಿಂದ ವಂಚಿತಳಾದ ಗ್ರಾಮೀಣ ಸ್ತ್ರೀಯೊಬ್ಬಳು ಅನುಭವಿಸುವ ಕತೆಯನ್ನು ಹೇಳುತ್ತಾರೆ. ಕತೆಯ ಪರಿಸರವನ್ನು ನೋಡುವುದಾದರೆ ಮೊದಲು ಗ್ರಾಮೀಣ ಮತ್ತು ನಂತರದಲ್ಲಿ ನಗರ ಜೀವನ ಚಿತ್ರಣವಿದೆ. ಇಂಥಹ ಎರಡು ವಿರುದ್ಧ ಪರಿಕಲ್ಪನೆಗಳನ್ನು ಮುಖಾಮುಖಿಯಾಗಿಸುವುದೇ ಲೇಖಕರ ವೈಶಿಷ್ಟ್ಯವಾಗಿದೆ. ಭಾಷೆಯೂ ಸಹ ನಿರೂಪಕನಲ್ಲಿ ಗ್ರಾಮೀಣ ಭಾಷೆಯೇ ಇದೆ. ಇದೊಂದು ಅಪ್ಪಟ ನವ್ಯ ಸಂವೇದನೆಯನ್ನು ಹೊಂದಿರುವ ಕತೆಯಾಗಿದೆ ಎಂದು ಹೇಳಬಹುದು.

'ಆಗಂತುಕ' ಕತೆಯೂ ಗ್ರಾಮೀಣ ಬದುಕಿನ ಒಂದು ಕತೆ. ಪ್ರತಿ ಕತೆಯನ್ನು ಹೇಳುವಾಗಲೂ ಹಳ್ಳಿಯ ಸೊಗಡನ್ನು ಹೇಳುತ್ತಲೇ ಬರುತ್ತಾರೆ. ಇಲ್ಲಿಯೂ ಇದು ದಟ್ಟವಾಗಿಯೇ ಇದೆ. 'ಕಾಡು' ಕಾದಂಬರಿಯಂತೆಯೇ ಬಾಲಕನ ಮೂಲಕ ಸಮಾಜವನ್ನು ನೋಡುವ ಕ್ರಮ ಇಲ್ಲಿದೆ. ಮುಗ್ಧ ಹುಡಗರ ಮೂಲಕವೂ ಕತೆ ಹೇಳಿಸುವುದು ನವ್ಯ ಕಥನ ಕ್ರಮದಲ್ಲೊಂದು. ಹಳ್ಳಿಯಲ್ಲಿ ಸಾಂಪ್ರದಾಯಿಕವಾಗಿ ನಂಬಿಕೊಂಡು ಬಂದಿದ್ದ ನಂಬಿಕೆಗಳು ನಿಜವಾಗುತ್ತವೆ ಎಂಬುದು ಧ್ವನಿಪೂರ್ಣವಾಗಿ ಕಂಡುಬರುತ್ತದೆ. ಇಡೀ ಕತೆ ಒಂದು ಗ್ರಾಮೀಣ ಸಮಾಜವನ್ನು ಬಿಟ್ಟು ಹೊರಬರುವುದಿಲ್ಲ. ಅವಶ್ಯಕತೆ ಬಂದ ಕಡೆ ಸಂಭಾಷಣೆ ಬರುತ್ತದೆ. ಹಿಂಡಾಕ್ಬುಟ್ಟದೆ, ಯಂಗಾಗ್ಬುಟ್ಟವ್ರೆ, ಜ್ವಾಕೆ, ಸಾಸ್ವತ, ಮುಂತಾದ ಗ್ರಾಮೀಣ ನುಡಿಗಟ್ಟುಗಳು ಕತೆಯಲ್ಲಿ ಸೇರಿಕೊಂಡಿವೆ.

'ಸರಿ ನೀನು ಹೋಗೊ, ಏರಿ ಮೇಲೆ ಜ್ವಾಕೆ, ಜಾರ್ತಾದೆ'[೯೦]

'ದೇವ್ರಂತ ಮನಸ್ರು ಮಲ್ಲಪ್ಪ, ಅಂತವ್ರಗೆ ಈ ರಾಕ್ಷಸ ತಾಯಿ ಸಿಕ್ಕಿದ್ಲು'[೯೧]

'ವಸಿ ಚುರುಕಾಗಿ ನಡಿ ಮೊಗ, ಯಾಕೊ ಮೊಡಾನೆ ಇಸ್ಕಂಡು ಬೀಳ ಅಂಗೆ ಕಾಣ್ತದೆ' ಮುಂತಾದ ಗ್ರಾಮೀಣ ಭಾಷೆಯ ನಿರೂಪಣೆಯಲ್ಲಿ ತುಂಬಿಕೊಂಡಿದೆ.[೯೨]

'ಆಗುಂತಕ' ಕತೆಯಂತೆಯೇ 'ನೆಲಗುಮ್ಮ' ಕತೆಯೂ ಹಳ್ಳಿಯ ಜೀವನವನ್ನು ಬಿಂಬಿಸುತ್ತದೆ. ಇದು ಹೊಸತು ಮತ್ತು ಹಳೆಯದನ್ನು ಮುಖಾಮುಖಿಯಾಗಿಸುವ ಇನ್ನೊಂದು ಕತೆ. ಇಲ್ಲಿಯೂ ಕಿಟ್ಟಿಯ ಪಾತ್ರ ಮುಂದುವರೆದು ಬಂದಂತಿದೆ. ಇವನೇ ಕತೆಯನ್ನು ನಿರೂಪಿಸುತ್ತಾ ಹೋಗುತ್ತಾನೆ. ಇವನು ಶಿಕ್ಷಣವನ್ನು ಪಡೆದವನಾದರೂ ಇಲ್ಲಿ ಪಾತ್ರಗಳು ಗ್ರಾಮೀಣರ ಆಡುಭಾಷೆಯನ್ನೇ ಬಳಸಿದ್ದಾರೆ. ಹಳೆಯ ತಲೆಮಾರಿನ ಜನರನ್ನು ಕತೆಯಲ್ಲಿ ತಂದಾಕ್ಷಣ ಅವರ ಕತೆಗಳಲ್ಲಿ ಸಹಜವಾಗಿಯೇ ಗ್ರಾಮ್ಯ ಭಾಷೆ ಸೇರಿಕೊಳ್ಳುತ್ತದೆ. ನವೋದಯದ ನಾಯಕನು ಸಾವನ್ನು

ಕಂಡು ಪ್ರತಿಕ್ರಿಯಿಸುವುದಕ್ಕೆ ಭಿನ್ನವಾಗಿ ಇಲ್ಲಿಯ ನಿರೂಪಕ ಪ್ರತಿಕ್ರಿಯಿಸುತ್ತಾನೆ. ಅವನಲ್ಲಿ ಸಾವನ್ನು ಕಂಡಾಗ ದುಃಖ, ಸಂಕಟ, ನೋವು ಕಾಣುವುದಿಲ್ಲ.

ಈ ಲೇಖಕರ ಸಮಗ್ರ ಕತೆಗಳಲ್ಲಿ 'ತಪ್ತ' ಕತೆಯಂತೆಯೇ 'ಫೀನಿಕ್ಸ್' ಕತೆ ಕೂಡ ಅತ್ಯಂತ ಜನಪ್ರಿಯವಾದ ಕತೆಯಾಗಿದೆ. ನವ್ಯ ಕತೆಗಳಿಂದ ಪ್ರಭಾವಿತರಾದ ಇವರು ಈ ಕತೆಯಲ್ಲಿ ನವ್ಯತೆಯನ್ನು ಸೇರಿಸಿದ್ದಾರೆ. ಒಬ್ಬ ಲೇಖಕ ಅಥವಾ ಕತೆಗಾರ ಬದುಕಿನ ವಿವರಗಳನ್ನು ಅಥವಾ ತಾನು ಕಂಡುಂಡ ಅನುಭವಗಳನ್ನು ಎಷ್ಟು ಪ್ರಾಮಾಣಿಕವಾಗಿ ವಾಸ್ತವದ ನೆಲೆಯಿಂದ ಹೇಳಲು ಸಾಧ್ಯವೋ ಆ ಎಲ್ಲವನ್ನು ಇಲ್ಲಿ ಕಟ್ಟಿಕೊಟ್ಟಿದ್ದಾರೆ. ಇಲ್ಲಿ ಎರಡು ಜಾತಿ, ಎರಡು ಲಿಂಗಗಳು, ಎರಡು ಸಮಾಜಗಳು ಮುಖಾಮುಖಿಯಾಗುತ್ತವೆ. ಇದು ಒಂದು ಪ್ರೇಮ ಕಥನದ ವಸ್ತುವನ್ನು ಒಳಗೊಂಡಿದೆ.

'ಫೀನಿಕ್ಸ್' ಬೌದ್ಧಿಕವಾಗಿ ವಿಕ್ಷಿಪ್ತ ಯುವಕರ ಸಮಾಜ. ಹಾಗೂ ನಗರ ಕೇಂದ್ರಿತವಾದ ಜೀವನ ವ್ಯವಸ್ಥೆಯನ್ನು ಚಿತ್ರಿಸುತ್ತದೆ. ಇಲ್ಲಿನ ನಿರೂಪಕ ಗ್ರಾಮೀಣ ಪ್ರದೇಶದಿಂದ ಬಂದವನಾಗಿದ್ದಾನೆ. ಕತೆಯ ನಾಯಕನೊಂದಿಗೆ ಕತೆಯ ನಿರೂಪಣೆ ಪ್ರಾರಂಭವಾಗುತ್ತದೆ. ಇಲ್ಲಿಯೂ ಏಕವ್ಯಕ್ತಿ ನಿರೂಪಣೆಯೇ ಕಂಡುಬರುತ್ತದೆ. ಇವರ ಕತೆಗಳಲ್ಲಿ ಸಂಭಾಷಣೆಗೆ ಅವಕಾಶವೇ ಇಲ್ಲ. ಆದ್ದರಿಂದ ಕತೆ ಓದುಗರಿಗೆ ಸರಾಗವಾಗಿ ಅರ್ಥವಾಗುತ್ತದೆ. ಭಾಷೆಯನ್ನು ನೋಡುವುದಾದರೇ ಇದು ಗ್ರಾಮೀಣದ್ದಲ್ಲ. ಶಿಕ್ಷಣವನ್ನು ಪಡೆದದ್ದರಿಂದ ಇಲ್ಲಿ ಪಾತ್ರಗಳು ಆಧುನಿಕ ಭಾಷೆಯನ್ನಾಡುತ್ತಾರೆ. ಲೈಬ್ರರಿ, ಅಬಾರ್ಷನ್, ಕ್ಲೋರೋಫಾರಂ, ಸೀರಿಯಸ್ಸಾಗಿ, ಪೋಸ್‌ಕೊಡು, ರೂಮನ್ನೆಲ್ಲಾ ಈ ರೀತಿ ಕೆಲವು ಕಡೆ ಇಂಗ್ಲಿಷ್ ಪದಗಳು ಸೇರಿಕೊಂಡಿವೆ. ಗ್ರಾಮೀಣ ಮತ್ತು ನಗರ ಎರಡರ ಭಾಷೆಯನ್ನು ಸರಾಗವಾಗಿ ಕತೆಗಳಲ್ಲಿ ತರುವ ಕಲೆಗಾರಿಕೆ ಲೇಖಕರಿಗೆ ಕರಗತವಾಗಿದೆ. ನಿರೂಪಣೆ ಸರಳವಾಗಿದ್ದು ತನ್ನ ಅಂತರಂಗದ ಭಾವನೆಗಳನ್ನು ಹೊರಸಾಕುವ ಗದ್ಯ ಕಾವ್ಯದ ಲಯವನ್ನು ಪಡೆದುಕೊಂಡಿದೆ.

ಫಲವತ್ತಾದ ಈ ಭೂಮಿ ಇನ್ನೊಬ್ಬರ ಸ್ವತ್ತಾಗುವ

ಅವನ ಬಯಕೆಗೆ ಮಣ್ಣಾಗುವ

ಅವನ ಇಚ್ಛೆಗೆ ಉಸಿರಾಗುವ

ಆಸೆಗೆ ತವಕಿಸಿದಾಗೆಲ್ಲ ಆಕ್ರೋಶ, ಆಕ್ರೋಶ, ಆಕ್ರೋಶ"

ಇಂತಹ ಹಲವು ಸ್ವಗತ ರೀತಿಯ ಭಾಷೆಯನ್ನು, ಕಾವ್ಯದ ಶೈಲಿಯನ್ನು ಇವರ ಕತೆಗಳಲ್ಲಿ ಗುರ್ತಿಸುತ್ತೇವೆ. ಈ ಕತೆ ಪ್ರೇಮ ಸಂಬಂಧಗಳು ಮದುವೆ ಸಂಬಂಧಗಳಿಗಿಂತಲೂ ಶ್ರೇಷ್ಠವಾದವು ಎಂಬ ಧ್ವನಿಯನ್ನು ಹೊಂದಿದೆ. ಇಲ್ಲಿನ ನಿರೂಪಕ ಪಾತ್ರವೂ ಟೊಳ್ಳಾಗಿ ಕಂಡುಬರುತ್ತದೆ. ಇದು ನವ್ಯ ನಾಯಕನ ದೌರ್ಬಲ್ಯವನ್ನು ಸೂಚಿಸುತ್ತದೆ.

'ಗೀಜಗನ ಗೂಡು', 'ಅಂಟಿಕೊಂಡ ನಂಟಿನ ಕೊನೆ ಬಲ್ಲವರಾರು...' 'ಇನ್ನೊಂದು ಪ್ರಣಯ ಪ್ರಸಂಗ', ಈ ಕತೆಗಳಲ್ಲಿ ಪ್ರೀತಿ-ಪ್ರೇಮ-ಕಾಮ ಇವೇ ಕಥಾವಸ್ತುಗಳು. ಇಲ್ಲಿನ ಸಮಾಜ ವಿದ್ಯಾವಂತರಾದ ಪ್ರೌಢರು. ಈ ಮೂರು ಕತಗಳಲ್ಲಿ ಏಕವ್ಯಕ್ತಿ ನಿರೂಪಣೆ ಇದ್ದು ಇದು ತನ್ನ ಸ್ವಂತ ಅನುಭವಗಳನ್ನು ಇನ್ನೊಬ್ಬರೊಂದಿಗೆ ಹಂಚಿಕೊಳ್ಳುವ ರೀತಿಯ ನಿರೂಪಣೆ. 'ಗೀಜಗದ ಗೂಡು' ಕತೆಯ ನಿರೂಪಕ ಹಳ್ಳಿಹುಡುಗ. ಈ ಕತೆಗಳಲ್ಲಿ ನಿರೂಪಕ ಅಥವಾ ನಾಯಕ ಪಾತ್ರ ಒಂದೇ ಆಗಿದ್ದು ಇವುಗಳಲ್ಲಿ ಒಂದಕ್ಕೊಂದು ಭೂತವರ್ತಮಾನದ ಸಂಬಂಧವನ್ನು ಹೊಂದಿರುವುದು ಕತೆಯ ನಿರೂಪಣೆಯಲ್ಲಿ ಸೂಕ್ಷ್ಮವಾಗಿ ಕಾಣುತ್ತೇವೆ.

ಇಲ್ಲಿ ಬಳಸಿರುವ ಭಾಷೆ ಬೇರೆ ಕತೆಗಳಿಗೆ ಹೋಲಿಸಿದರೆ ಭಿನ್ನವಾಗಿದೆ. ಸಂಭಾಷಣೆಯ ಜೊತೆ ಜೊತೆಯಲ್ಲಿ ಇಂಗ್ಲೀಷ್ ಭಾಷೆ ಮತ್ತು ಆಡುಭಾಷೆಯ ಸರಳತೆ ಕಂಡುಬರುತ್ತದೆ. ಕತೆಯ ನಿರೂಪಕ ಹಳ್ಳಿಯಿಂದ ಬಂದವನಾದರೂ ಅವನ ಭಾಷೆಯಲ್ಲಿ ಹಳ್ಳಿತನ ಕಳೆದು ಹೋಗಿದೆ. ಲಾಡ್ಜ್, ಲೈಬ್ರರಿ, ಸಿಗರೇಟ್, ಗಾಲ್ಫ್ ಕ್ಲಬ್,

ವಿಸ್ಕಿ, ಟಿಫಿನ್ ಮುಂತಾದ ಇಂಗ್ಲಿಷ್ ಭಾಷೆ ಹೆಚ್ಚಾಗಿ ಈ ಕತೆಗಳಲ್ಲಿ ಬಂದಿದೆ. ತಾನು ರಚಿಸುತ್ತಿರುವ ಸಮಾಜಕ್ಕೆ ಯಾವ ಭಾಷೆ ಸೂಕ್ತ ಎಂಬುದನ್ನು ಮನಗಂಡು ಅದನ್ನೆಲ್ಲ ಪ್ರೌಢವಾಗಿ ತಂದು ಕತೆಯ ವಾಸ್ತವತೆಯನ್ನು ಹೆಚ್ಚಿಸುತ್ತಾರೆ. ಇಲ್ಲಿನ ನಿರೂಪಣೆ ತನ್ನ ಅನುಭವವನ್ನು ಕತೆಯ ರೂಪದಲ್ಲಿ ಓದುಗರ ಮುಂದೆ ಹೇಳುವ ರೀತಿಯಲ್ಲಿದೆ. ಕನ್ನಡದ ಎಲ್ಲಾ ನವ್ಯ ಲೇಖಕರಿಗಿಂತ ಭಿನ್ನವಾಗಿ ಕಾಮ ಮತ್ತು ಲೈಂಗಿಕತೆಯನ್ನು ವಸ್ತುವನ್ನಾಗಿ ತೆಗೆದುಕೊಂಡು ಕತೆಗಾರರಾಗಿ ಗೆದ್ದವರು ಶ್ರೀಕೃಷ್ಣ ಆಲನಹಳ್ಳಿ ಅವರು ಎಂಬುದು ಈ ಕತೆಗಳಿಂದ ತಿಳಿಯುತ್ತದೆ.

'ಸುಟ್ಟತಿಕದ ದೇವರು' ಇದು ಒಂದು ನೀಳ್ಗತೆಯಾಗಿದೆ. ಹಳ್ಳಿಯ ಅನುಭವವನ್ನು ಕಟ್ಟಿಕೊಡುವ ಈ ಕತೆ ವಾಸ್ತವವಾಗಿ ನಡೆದಿರುವ ಬಗ್ಗೆ ಕತೆಯಲ್ಲಿಯೇ ಹಲವು ಸೂಚನೆಗಳನ್ನು ತೆರೆದಿಡುತ್ತಾರೆ. ಲೇಖಕರ ಎಲ್ಲಾ ಕತೆಗಳಿಗಿಂತ ವಿಶಿಷ್ಟವೂ ಹಾಗೂ ಅತ್ಯುತ್ತಮವಾದದ್ದೂ ಆಗಿದೆ. ಇಲ್ಲಿಯೂ ಸಹ ಏಕವ್ಯಕ್ತಿ ನಿರೂಪಣೆ ಇದೆ. ಕತೆಯಲ್ಲಿಯೇ ಇನ್ನೊಂದು ಕತೆ ಹೇಳುವುದು ಕಾಣುತ್ತೇವೆ. ಮತ್ತು ಒಂದು ಪಾತ್ರವೂ ಆಗಿದೆ. ಕತೆ ಮೂರು ಕಾಲಘಟ್ಟಗಳನ್ನು ಒಳಗೊಂಡಿರುವುದು ಸೂಕ್ಷ್ಮವಾಗಿ ಗೊತ್ತಾಗುತ್ತದೆ. ಮೊದಲನೆಯದಾಗಿ ನಿರೂಪಕನ ಬಾಲ್ಯ, ಕಾಲೇಜು ವಿದ್ಯಾಭ್ಯಾಸ ಮತ್ತು ಅಂತರ್‌ಜಾತಿ ವಿವಾಹವಾಗಿ ಸಾಂಸಾರಿಕ ಜೀವನ, ಕಾಮದ ವಿಷಯಗಳು ಬಂದರೂ ಅವನ್ನು ವರ್ಣರಂಜಿತವಾಗಿ ಹೇಳುವುದು ಇವರ ಉದ್ದೇಶವಲ್ಲ. ಬದಲಾಗಿ ಬದುಕಿನ ಕೆಲವು ಸೂಕ್ಷ್ಮಗಳನ್ನು ಎಚ್ಚರಿಸುವುದರ ಮೂಲಕ ದುರಂತವನ್ನು ಕಟ್ಟಿಕೊಡುವುದಾಗಿದೆ. ಭಾಷೆಯ ದೃಷ್ಟಿಯಿಂದ ಗ್ರಾಮೀಣ ಭಾಷೆಯನ್ನೇ ಒಳಗೊಂಡಿದ್ದು ಕೃಷಿ ಬದುಕಿನ ನುಡಿಗಟ್ಟುಗಳು ಈ ಭಾಷೆಯಲ್ಲಿ ಸೇರಿಕೊಂಡಿವೆ. ಪಡ್ಡೆ ಐಕಳು, ಹಜಾರದಲ್ಲಿ, ಇಂಗಾಯ್ತಂತೆ, ಮೊಗಚಿಕೊಂಡು ಬಿಡುವ ಇಂತಹ ಗ್ರಾಮ್ಯ ಪದಗಳಿಂದ ಕತೆ ಸಾಗುತ್ತದೆ.

ಒಂದು ಕಾದಂಬರಿಯಲ್ಲಿ ಹೇಳುವಂತಹ ವಿಷಯವನ್ನು ಸಂಕ್ಷಿಪ್ತವಾಗಿ ಹೇಳುವುದು ವಿಶೇಷವಾಗಿದೆ. ಇಲ್ಲಿನ ದುರಂತದೊಂದಿಗೆ ಓದುಗರಿಗೆ ಅದರ ಸೂಕ್ಷ್ಮತೆಯನ್ನು ಮತ್ತು ಅರಿವಿನ ದಾರಿಯನ್ನು ತಿಳಿಸುವ ಒಂದು ಪ್ರಯತ್ನವಾಗಿದೆ.

## ಅಡಿ ಟಿಪ್ಪಣಿಗಳು

೧. ಜಿ. ಬಿ. ಜೋಷಿ, ಪುಟ ಬಂಗಾರ, (ಕಾಡು), ಪು. ೭೮೨

೨. ಅದೇ, ಪು. ೭೮೨

೩. ಅದೇ, ಪು. ೭೮೩

೪. ಶ್ರೀಕೃಷ್ಣ ಆಲನಹಳ್ಳಿ, ಪರಸಂಗದ ಗೆಂಡೆತಿಮ್ಮ, ಪು. ೩೦

೫. ಶ್ರೀಕೃಷ್ಣ ಆಲನಹಳ್ಳಿ, ಪರಸಂಗದ ಗೆಂಡೆತಿಮ್ಮ, ಪು. ೧೬೩

೬. ಶ್ರೀಕೃಷ್ಣ ಆಲನಹಳ್ಳಿ, ಪರಸಂಗದ ಗೆಂಡೆತಿಮ, ಪು. ೧೫೪

೭. ಶ್ರೀಕೃಷ್ಣ ಆಲನಹಳ್ಳಿ, ಆಲನಹಳ್ಳಿ ಸಮಗ್ರ ಕಥೆಗಳು, ಪು. ೧೩

೮. ಶ್ರೀಕೃಷ್ಣ ಆಲನಹಳ್ಳಿ, ಆಲನಹಳ್ಳಿ ಸಮಗ್ರ ಕಥೆಗಳು, ಪು. ೧೮

೯. ಶ್ರೀಕೃಷ್ಣ ಆಲನಹಳ್ಳಿ, ಆಲನಹಳ್ಳಿ ಸಮಗ್ರ ಕಥೆಗಳು, ಪು. ೭೩

೧೦. ಶ್ರೀಕೃಷ್ಣ ಆಲನಹಳ್ಳಿ, ಆಲನಹಳ್ಳಿ ಸಮಗ್ರ ಕಥೆಗಳು, ಪು. ೮೨

೧೨. ಶ್ರೀಕೃಷ್ಣ ಆಲನಹಳ್ಳಿ, ಆಲನಹಳ್ಳಿ ಸಮಗ್ರ ಕಥೆಗಳು, ಪು. ೮೩

೧೩. ಶ್ರೀಕೃಷ್ಣ ಆಲನಹಳ್ಳಿ, ಆಲನಹಳ್ಳಿ ಸಮಗ್ರ ಕಥೆಗಳು, ಪು. ೮೫

೧೪. ಶ್ರೀಕೃಷ್ಣ ಆಲನಹಳ್ಳಿ, ಆಲನಹಳ್ಳಿ ಸಮಗ್ರ ಕಥೆಗಳು, ಪು. ೧೦೨

## ಅನುಬಂಧ

### ಶ್ರೀಕೃಷ್ಣ ಆಲನಹಳ್ಳಿ ಅವರ ಕೃತಿಗಳು,

**ಸಣ್ಣ ಕಥೆಗಳು**

೧. ತಪ್ತ, ೧೯೭೦

೨. ಫೀನಿಕ್ಸ್, ೧೯೭೪

**ಬಿಡಿ ಕತೆಗಳು,**

೧. ಸುಟ್ಟ ತಿಕದ ದೇವರು, ೧೯೮೭, ಲಂಕೇಶ್ ಪತ್ರಿಕೆ ವಿಶೇಷಾಂಕ

೨. ಮಾಮರವೂ ಮಾಪಿಳ್ಳೆಯು, ೧೯೮೯, ಅಪೂರ್ಣ

**ಕಾದಂಬರಿಗಳು**

೧. ಕಾಡು, ೧೯೭೧

೨. ಪರಸಂಗದ ಗೆಂಡೆತಿಮ, ೧೯೭೪

೩. ಭುಜಂಗಯ್ಯನ ದಶಾವತಾರಗಳು, ೧೯೮೨

೪. ಗೋಡೆ, ಅಪೂರ್ಣ

೫. ಅರಗಿನ ಅರಮನೆ, ಅಪೂರ್ಣ

### ಶ್ರೀಕೃಷ್ಣ ಆಲನಹಳ್ಳಿ ಕುರಿತ ಕೃತಿಗಳು

೧. ಕಾಡಿನ ಹುಡುಗ, ೧೯೯೦

ಸಂವಾದ ಪ್ರಕಾಶ, ಮಲ್ಲಾಡಿ ಹಳ್ಳಿ ಅಂಚೆ, ೫೭೭೫೩೧

೨. ಪುಸ್ತಕ ಪ್ರಪಂಚ, ೧೯೮೯,

(ಮಾಸಿಕ/ ಸಂಪುಟ ೪೩ ಸಂಚಿಕೆ, ೭-೮)

ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು, ೫೭೦೦೦೪

೩. ಸಂಸ್ಕೃತಿಯ ಸ್ಥಿತ್ಯಂತರ ಮತ್ತು ಶ್ರೀಕೃಷ್ಣ ಆಲನಹಳ್ಳಿಯವರ ಸಾಹಿತ್ಯ

(ವಿವಿಧ ಲೇಖಕರು),

ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೫೬೦೦೦೨

## ಶ್ರೀಕೃಷ್ಣ ಆಲನಹಳ್ಳಿ ಅವರ ಸಾಹಿತ್ಯ ಕುರಿತ ಅಧ್ಯಯನಗಳು


೧. ಶ್ರೀಕೃಷ್ಣ ಆಲನಹಳ್ಳಿಯವರ ತಪ್ತ, ಡಾ. ಯು. ಆರ್. ಅನಂತಮೂರ್ತಿ,

ನವ್ಯಲೋಕ, ಅಕ್ಷರಪ್ರಕಾಶನ, ಹೆಗ್ಗೋಡು, ಸಾಗರ, ೧೯೯೭

(ಸಂ., ಡಾ. ಯು. ಆರ್. ಅನಂತಮೂರ್ತಿ)

೨. 'ತಪ್ತ', ಆಲನಹಳ್ಳಿಯವರ 'ಮಣ್ಣಿನ ಕಥೆಗಳು' ಕೆ. ವಿ. ತಿರುಮಲೇಶ್,

ಸಾಕ್ಷಿ, ಶರತ್ ಸಂಚಿಕೆ, ಅಕ್ಟೋಬರ್, ೧೯೭೧, ಅಕ್ಷರ ಪ್ರಕಾಶನ, ಹೆಗ್ಗೋಡು

(ಸಂ., ಗೋಪಾಲಕೃಷ್ಣ ಅಡಿಗ)

೩. ಶ್ರೀಕೃಷ್ಣ ಆಲನಹಳ್ಳಿಯವರ ಕಾಡು, ಬಿ. ಜಯದೇವಪ್ಪ

ಸಾಕ್ಷಿ, ಹೇಮಂತ ಸಂಚಿಕೆ, ಜನವರಿ, ೧೯೭೩, ಅಕ್ಷರ ಪ್ರಕಾಶನ

(ಸಂ., ಗೋಪಾಲಕೃಷ್ಣ ಅಡಿಗ)

೪. ಆಲನಹಳ್ಳಿಯವರ ಪರಸಂಗದ ಗೆಂಡೆತಿಮ್ಮ, ಮಾಧವ ಕುಲಕರ್ಣಿ,

ಸಾಕ್ಷಿ, ವರ್ಷ ಸಂಚಿಕೆ, ಜುಲೈ, ೧೯೭೫, ಅಕ್ಷರ ಪ್ರಕಾಶನ,

(ಸಂ., ಗೋಪಾಲಕೃಷ್ಣ ಅಡಿಗ)

೫. ಭುಜಂಗಯ್ಯನ ದಶಾವತಾರಗಳು, ಜಿ. ಪಿ. ಬಸವರಾಜು

ರುಜುವಾತು, ಏಪ್ರಿಲ್:ಜೂನ್, ೧೯೮೪

(ಸಂ. ಯು. ಆರ್. ಅನಂತಮೂರ್ತಿ)

೬. ಭುಜಂಗಯ್ಯನ ದಶಾವತಾರಗಳು, ಎಲ್. ಎಸ್. ಶೇಷಗಿರಿರಾವ್,

ಚಂದನ, ಸಂಪುಟ ೩, ಆಗಸ್ಟ್ ಅಕ್ಟೋಬರ್, ೧೯೮೫

(ಪ್ರ. ಸಂ., ಕೆ. ಎಸ್. ನಿಸಾರ್ ಅಹಮದ್)

ಕಾಡು: ಗಿರಡ್ಡಿ ಗೋವಿಂದರಾಜು

ಕಾದಂಬರಿ: ವಸ್ತು ಮತ್ತು ತಂತ್ರ, ಸ್ನೇಹ ಪ್ರಕಾಶನ, ಬೆಂಗಳೂರು

೮. ನಾಯಕನಿಗಾಗಿ: ಡಾ. ಕೆ. ವಿ. ನಾರಾಯಣ

ಶೂದ್ರ ಸಂಚಿಕೆ ೩, ಸಂಪುಟ ೧೧, ನವೆಂಬರ್, ೧೯೮೫

೯. ಕೃಷ್ಣ ಕಣ್ಮರೆ: ಪಿ. ಲಂಕೇಶ್,

ಕೃಷ್ಣ: ಒಂದು ಸಂತಾಪ ಸಭೆ: ಪಿ. ಲಂಕೇಶ್,

ಟೀಕೆ ಟಿಪ್ಪಣಿ, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೮೯

## ಪರಾಮರ್ಶನ ಗ್ರಂಥಗಳು


೧. ಅಮರೇಶ ನುಗಡೋಣಿ, ೧೯೯೫, ಶ್ರೀಕೃಷ್ಣ ಆಲನಹಳ್ಳಿ, ಪ್ರಸಾರಾಂಗ, ಕ.ವಿ.ವಿ.ಹಂ.

೨. ಅಶೋಕ ಟಿ. ಪಿ., ೧೯೯೧, **ಸಾಹಿತ್ಯ ಸಂದರ್ಭ**, ಅಕ್ಷರ ಪ್ರಕಾಶನ, ಹೆಗ್ಗೋಡು,

೩. ಕರೀಗೌಡ ಬೀಚನಹಳ್ಳಿ, ೧೯೯೧, **ವ್ಯಷ್ಟಿ ಮತ್ತು ಸಮಷ್ಟಿ**, ಅನಂತ ಪ್ರಕಾಶನ, ಬೆಂಗಳೂರು

೪. ಗಿರಿಡ್ಡಿ ಗೋವಿಂದರಾಜು, ೧೯೭೬, **ಕಾದಂಬರಿ ವಸ್ತು ಮತ್ತು ತಂತ್ರ**, ಬಾಪ್ಕೋ ಪ್ರಕಾಶನ, ಬೆಂಗಳೂರು

೫. ಅಮೂರ ಜಿ. ಎಸ್., ೧೯೮೮, **ಅರ್ಥಲೋಕ**, ಸ್ನೇಹ ಪ್ರಕಾಶನ, ಬೆಂಗಳೂರು,

೬. ಅನಂತ ಮೂರ್ತಿ ಯು. ಆರ್, ೧೯೮೦, **ಸಮಕ್ಷಮ**, ಅಕ್ಷರ ಪ್ರಕಾಶನ, ಹೆಗ್ಗೋಡು

೭. ರಾಮಚಂದ್ರ ಆರ್., ೨೦೦೪, **ಪೂರ್ವ ಪಶ್ಚಿಮ**, ಸಿ.ವಿ.ಜಿ.ಪಬ್ಲಿಕೇಶನ್ಸ್, ಬೆಂಗಳೂರು

೮. ನಾಗಭೂಷಣ ಸ್ವಾಮಿ ಓ. ಎಲ್., ೧೯೮೯, **ಸಾಹಿತ್ಯ ವಿಮರ್ಶೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೯. ನಾರಾಯಣ ಕೆ. ವಿ., ೧೯೯೭, **ಬೇರು ಕಾಂಡ ಚಿಗುರು**, ವಿವೇಕ ಪ್ರಕಾಶನ, ಬೆಂಗಳೂರು

೧೦. ಕಲಬುರ್ಗಿ ಎಂ. ಎಂ., ೧೯೯೨, **ಕನ್ನಡ ಸಂಶೋಧನಾ ಶಾಸ್ತ್ರ**, ಸೌಜನ್ಯ ಪ್ರಕಾಶನ, ಧಾರವಾಡ

೧೧. ನಾಯಕ್ ಜಿ. ಎಚ್., ೨೦೦೦, **ಶತಮಾನದ ಕನ್ನಡ ಸಾಹಿತ್ಯ**, ರಾಘವೇಂದ್ರ ಪ್ರಕಾಶನ, ಅಂಕೋಲ, ಉತ್ತರ ಕನ್ನಡ

೧೨. ಗಿರಡ್ಡಿ ಗೋವಿಂದರಾಜು, ೨೦೦೧, **ಸಮಗ್ರ ವಿಮರ್ಶೆ**, ಸ್ವಪ್ನ ಬುಕ್ ಹೌಸ್, ಬೆಂಗಳೂರು

೧೩. ನಾಗರಾಜ ಡಿ. ಆರ್., ೧೯೮೭, **ಶಕ್ತಿ ಶಾರದೆಯ ಮೇಳ**, ಅಕ್ಷರ ಪ್ರಕಾಶನ, ಹೆಗ್ಗೋಡು

೧೪. ಶಾಂತಿನಾಥ ದೇಸಾಯಿ, ೧೯೯೦, **ನವ್ಯ ಸಾಹಿತ್ಯ ದರ್ಶನ**, ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ

೧೫. ಶಿರೂರ ಬಿ. ವಿ., ೨೦೦೦, **ಸಂಶೋಧನೆಯ ಸ್ವರೂಪ**, ಸ್ನೇಹ ಪ್ರಿಂಟರ್ಸ್, ಬೆಂಗಳೂರು

೧೬. ಚಿದಾನಂದ ಮೂರ್ತಿ, ೨೦೦೨, **ಸಂಶೋಧನೆ**, ಕರ್ನಾಟಕ ಪ್ರೆಸ್, ಮೈಸೂರು,

೧೭. ಕಲಬುರ್ಗಿ ಎಂ. ಎಂ., ೨೦೦೨, **ಕನ್ನಡ ಸಂಶೋಧನಾ ಶಾಸ್ತ್ರ**, ಸ್ವಪ್ನ ಬುಕ್ ಹೌಸ್, ಬೆಂಗಳೂರು,

೧೮. ಶಿವರುದ್ರಪ್ಪ ಜಿ. ಎಸ್., ೨೦೦೩, **ವಿಮರ್ಶೆಯ ಪೂರ್ವ ಪಶ್ಚಿಮ**, ಸಾಹಿತ್ಯ ಭಂಡಾರ, ಬೆಂಗಳೂರು

೧೯. ಸಂಗಮೇಶ ಸವದತ್ತಿ ಮಠ, ೨೦೦೩, **ಕನ್ನಡ ಸಾಹಿತ್ಯ ಸಂಶೋಧನೆಯ ಇತಿಹಾಸ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೨೦. ಬಸವರಾಜ ಸಬರದ, ೨೦೦೫, **ಸಾಹಿತ್ಯ ವಿಮರ್ಶೆ**, ಪಲ್ಲವಿ ಪ್ರಕಾಶ, ಗುಲ್ಬರ್ಗಾ,

೨೧. ಶೇಷಗಿರಿ ರಾವ್, ಎಲ್. ಎಸ್., ೨೦೦೨, **ಹೊಸಗನ್ನಡ ಸಾಹಿತ್ಯ ಚರಿತ್ರೆ**, ಅಂಕಿತ ಪುಸ್ತಕ, ಬಸವನಗುಡಿ, ಬೆಂಗಳೂರು